ನವಸಾಕ್ಷರ ಪುಸ್ತಕ ಮಾಲೆ ೬೨

# ಕಳೆದ ಮಕ್ಕಳು

ಅನ್ನಪೂರ್ಣ






ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಲೋಕಶಿಕ್ಷಣ ನಿರ್ದೇಶನಾಲಯ

ನವಸಾಕ್ಷರ ಪುಸ್ತಕ ಮಾಲೆ – ೯೩

# ಕಳೆದ ಮಕ್ಕಳು

ಅನ್ನಪೂರ್ಣ






ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ
ಹಂಪಿ–೫೮೩ ೨೭೭

KALEDA MAKKALU : By Annapurna. Published by The Director of Prasaranga, Kannada University, Hampi - 583 211, KARNATAKA.
First Impression 1994, Pp.ii + 26, Rs. 8.00.

---



ಸಂಯೋಜನಾಧಿಕಾರಿ
ಡಾ.ಎಚ್.ಎಸ್.ಶ್ರೀಮತಿ
ಪಠ್ಯ ಪುಸ್ತಕ ರಚನಾ ವಿಭಾಗ

ಪ್ರಕಾಶಕರು
ನಿರ್ದೇಶಕರು
ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ
ಹಂಪಿ – ೫೮೩ ೨೧೧

ಮುಖಪುಟ ವಿನ್ಯಾಸ
ಕೆ.ಮಕಾಳಿ

ಬೆಲೆ : ರೂ. ೮.೦೦

ಮುದ್ರಕರು
ಬೃಂದಾವನ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್ ಪ್ರೈ.ಲಿ.
೧೨/೧೩, ಲಾಲ್‌ಬಾಗ್ ಫೋರ್ಟ್ ರಸ್ತೆ,
ಬೆಂಗಳೂರು – ೫೬೦ ೦೦೪.

# ಕಳೆದ ಮಕ್ಕಳು

ಇದು ನಮ್ಮ ದೇಶ. ಇದು ತುಂಬ ವಿಶಾಲವಾದುದು. ಇಲ್ಲಿ ಪವಿತ್ರ ಬೆಟ್ಟಗಳಿವೆ; ಪವಿತ್ರ ನದಿಗಳಿವೆ. ಈ ದೇಶದ ಜನ ತುಂಬ ಭಕ್ತಿವಂತರು. ಇವರು ವರ್ಷಕ್ಕೆ ಒಮ್ಮೆಯಾದರೂ ಯಾವುದಾದರೊಂದು ಬೆಟ್ಟವನ್ನು ಹತ್ತಿ ಇಳಿಯುವರು; ವರ್ಷಕ್ಕೆ ಎರಡು ಸಾರಿಯಾದರೂ ಯಾವುದಾದರೊಂದು ಪವಿತ್ರ ನದಿ ಅಥವ ಹೊಳೆ ಹಳ್ಳಗಳಲ್ಲಿ ಮುಳುಗಿ ಏಳುವರು. ದಿನನಿತ್ಯ ಒಂದಲ್ಲಾ ಒಂದು ಗುಡಿಯ ಗಂಟೆ ಬಡಿಯುವರು.

ಇಂಥ ಜನರಿಂದಲೇ ತುಂಬಿದ್ದ ಒಂದು ಊರು ಈ ದೇಶದಲ್ಲಿತ್ತು. ಅದು ಹೆಚ್ಚು ದೊಡ್ಡದೂ ಆಗಿರಲಿಲ್ಲ; ಅತಿ ಚಿಕ್ಕದೂ ಆಗಿರಲಿಲ್ಲ. ಕೆಲವು ಕಡೆ ವಿಶಾಲವಾದ ರಸ್ತೆಗಳು ಇದ್ದವು. ಹಲವು ಕಡೆ ಇಕ್ಕಟ್ಟಾದ ಸಂದಿಗೊಂದಿಗಳು ಇದ್ದವು. ಕೆಲವು ಕಡೆ ವ್ಯವಹಾರ ಕುಶಲಿಗಳಾದ ಜನ ವಾಸಿಸುತ್ತ ಇದ್ದರೆ ಹಲವು ಕಡೆ ಮುಗ್ಧರೂ; ಮೂಢರೂ ಆದ ಜನ ಅತಿ ಹೆಚ್ಚು ಸಂಖ್ಯೆಯಲ್ಲಿ ವಾಸಿಸುತ್ತ ಇದ್ದರು. ಒಂದು

ವಿಚಿತ್ರ ಸಂಗತಿ ಎಂದರೆ ಉಳ್ಳವರಿಗಿಂತ ಮುಗ್ಧ ಬಡವರೇ ಸುಖವಾಗಿ ಜೀವಿಸುತ್ತ ಇದ್ದರು. ಒಟ್ಟಿನಲ್ಲಿ ಆ ಗ್ರಾಮದಲ್ಲಿ ಮಧ್ಯಮ ವರ್ಗದ ಜನರೇ ಹೆಚ್ಚು ಇದ್ದರು.

ಆ ಗ್ರಾಮದ ಒಂದು ಓಣಿಯಲ್ಲಿ ಒಬ್ಬ ಮಾನವ ಇದ್ದನು. ಅವನು ನೋಡಲು ಕುಳ್ಳಗೆ ದಪ್ಪಗೆ ಇದ್ದನು. ಮುಖದ ತುಂಬ ಗಡ್ಡ ಬಿಟ್ಟಿದ್ದನು. ಮೀಸೆ ಗಡ್ಡದ ನಡುವೆ ಆಗಾಗ್ಗೆ ಅವನು ಬಾಯಿತೆರೆಯುತ್ತ ಇದ್ದನು. ಆಗ ಹಲ್ಲುಗಳು ಕಂದು ಬಣ್ಣದಿಂದ ಹೊಳೆಯುತ್ತ ಇದ್ದವು. ಕಣ್ಣುಗಳಿಗೆ ದಪ್ಪನೆಯ ಚಾಳೇಸು ಧರಿಸುತ್ತ ಇದ್ದನು. ಅವನು ಮಾತಾಡುತ್ತ ಇದ್ದುದೇ ಅಪರೂಪ. ಸದಾ ಯಾವುದಾದರು ಒಂದು ಕೆಲಸದಲ್ಲಿ ಮಗ್ನನಾಗಿ ಇರುತ್ತಿದ್ದನು. ಅವನು ತನ್ನ ಸತಿ ಬಳಿಯೂ ಹೆಚ್ಚು ಮಾತಾಡುತ್ತ ಇರಲಿಲ್ಲ. ಆಕೆಯೂ ಹೆಚ್ಚಿಗೆ ಮಾತಾಡಿ ಗಂಡನಿಗೆ ತೊಂದರೆ ಕೊಡುತ್ತ ಇರಲಿಲ್ಲ. ಆಕೆಗೆ ತನ್ನ ಗಂಡ ಏನಾದರೂ ದೊಡ್ಡದು ಸಾಧಿಸಲಿ ಎಂಬ ಆಸೆ ಇತ್ತು. ಆದ್ದರಿಂದ ತನ್ನ ಎಂಟು ಪುಟ್ಟ ಮಕ್ಕಳ ಪೋಷಣೆಯಲ್ಲಿ ಕಾಲ ಕಳೆಯುತ್ತಿದಳು.

ಓಣಿಯ ಜನರ ಬಾಯಿ ಸುಮ್ಮನೆ ಇರುತ್ತ ಇರಲಿಲ್ಲ. ನಿಮ್ಮ ಅಪ್ಪ ಏನು ಮಾಡುತ್ತಾನೆ; ನಿಮ್ಮ ಅಮ್ಮ ಏನು ಮಾಡುತ್ತಾಳೆ? ಎಂಬ ಪ್ರಶ್ನೆಗಳನ್ನು ಹಾಕುತ್ತ ಇದ್ದರು. ಅದಕ್ಕೆ ಮಕ್ಕಳು ನಮ್ಮ ಅಪ್ಪ ಅದು ಮಾಡುತ್ತಾನೆ; ನಮ್ಮ ಅಮ್ಮ ಇದು ಮಾಡುತ್ತಾಳೆ ಎಂದು ಹೇಳುತ್ತ ಇದ್ದವು. ಆಗ ಓಣಿ ಜನ ಹೋ ಹಾಗೋ! ಎಂದು ಉದ್ಗರಿಸುತ್ತ ಇದ್ದರು.

ಅವರ ಕುತೂಹಲ ಅಲ್ಲಿಗೆ ತಣಿಯುತ್ತ ಇರಲಿಲ್ಲ. ಅವರು ಏನಾದರೂ ಒಂದು ನೆಪ ಒಡ್ಡಿ ಆ ಮನೆ ಬಳಿಗೆ ಹೋಗುತ್ತ ಇದ್ದರು. ಆ ಮನೆಗೆ ಇರಬಹುದಾದ ಬಾಗಿಲು; ಕಿಟಕಿಯಲ್ಲಿ; ಗೋಡೆಗಳ ಕಿಂಡಿಗಳಲ್ಲಿ ಇಣುಕಿ ನೋಡುತ್ತ ಇದ್ದರು. ಆದರೆ ಒಳಗಿನದು ಏನೂ ಕಾಣಿಸುತ್ತ ಇರಲಿಲ್ಲ; ಅವರಿಗೆ ನಿರಾಸೆ ಆಗುತ್ತಿತ್ತು. ಮೂಗು ಚಾಚಿ ವಾಸನೆ ಗ್ರಹಿಸುತ್ತ ಇದ್ದರು. ಅದಕ್ಕೆ ತಪ್ಪು ಅರ್ಥ ಹಚ್ಚುತ್ತ ಇದ್ದರು. ಅವನು ಸೋಮಾರಿ; ಅವನು ಗೂಬೆಯಂಥವನು ಎಂದು ಆಡಿಕೊಳ್ಳುತ್ತ ಇದ್ದರು.

ಕೆಲಸದಲ್ಲಿ ಮಗ್ನನಾಗಿದ್ದ ಆ ಕುಳ್ಳ ವ್ಯಕ್ತಿ ಜನರು ಏನು ಅನ್ನುವರು? ಏನು ಬಿಡುವರು? ಎಂಬ ಬಗ್ಗೆ ತಲೆಕೆಡಿಸಿಕೊಳ್ಳುತ್ತ ಇರಲಿಲ್ಲ. ಅವನು ಹೊಗಳಿಕೆಗೆ ಹಿಗ್ಗುತ್ತಿರಲಿಲ್ಲ! ತೆಗಳಿಕೆಗೆ ಕುಗ್ಗುತ್ತ ಇರಲಿಲ್ಲ. ತನ್ನ ಪಾಡಿಗೆ ತಾನು ಕೆಲಸ ಮಾಡುತ್ತ ಇದ್ದನು. ಆಗಾಗ್ಗೆ ಹೊರಗೆ ಕಾಣಿಸಿಕೊಂಡು ಮುಗುಳುನಗುತ್ತಿದ್ದನು. ಜನರೊಂದಿಗೆ ಎಷ್ಟು ಬೇಕೋ ಅಷ್ಟು ಮಾತು ಆಡುತ್ತ ಇದ್ದನು! ಅವನಿಗೆ ಮಕ್ಕಳು ಎಂದರೆ ಪಂಚಪ್ರಾಣ! ಮಕ್ಕಳನ್ನು ಎತ್ತಿಕೊಳ್ಳುತ್ತಿದ್ದನು. ಅವುಗಳ ಕೆನ್ನೆಗೆ ಮುದ್ದು ಕೊಡುತ್ತ ಇದ್ದನು. ಅವುಗಳ ಬೆನ್ನು; ತಲೆ ನೇವರಿಸುತ್ತ ಇದ್ದನು. ತಿನ್ನಲು ಚಿಕ್ಕಪುಟ್ಟ ಮಿಠಾಯಿ ಕೊಡಿಸುತ್ತ ಇದ್ದನು. ಮಕ್ಕಳು ಅಕಸ್ಮಿಕವಾಗಿ ಒಳಗಡೆ ಬಂದರೆ ಅವನು ಗದರಿಸುತ್ತ ಇರಲಿಲ್ಲ. ಪ್ರೀತಿಯಿಂದ ತಿಳಿ ಹೇಳುತ್ತ ಇದ್ದನು. ಬಳಿ ಬಿಟ್ಟುಕೊಳ್ಳುತ್ತ ಇದ್ದನು. ಹಾಗೆ ದೂರ ಕಳಿಸುತ್ತ ಇದ್ದನು.

ಬರಬಾರದು; ಎಂದು ಹೇಳುತ್ತ ಇದ್ದನು.

"ಯಾಕೆ ಬರಬಾರದು?" ಎಂದು ಮಕ್ಕಳು ಮುಗ್ಧತೆಯಿಂದ ಕೇಳುತ್ತ ಇದ್ದವು.

"ನೀವು ಇನ್ನೂ ಎಳೆಮಕ್ಕಳು. ಇಲ್ಲಿಗೆ ಬಂದರೆ ನಿಮಗೆ ಅಪಾಯ" ಎಂದು ಹೇಳುತ್ತಿದ್ದನು.

ಮೊದಲೆ ಹಠದ ಮಕ್ಕಳಾದ ಅವು ಅಷ್ಟಕ್ಕೆ ಸುಮ್ಮನಾಗುತ್ತ ಇರಲಿಲ್ಲ.

"ಅಪಾಯ ಎಂದರೇನು?" ಎಂಬ ಪ್ರಶ್ನೆಹಾಕುತ್ತ ಇದ್ದವು.

ಅದಕ್ಕೆ ಅವನು ನಕ್ಕು ಬಿಡುತ್ತಿದ್ದನು.

"ಅದೆಲ್ಲ ನೀವು ಬೆಳೆದು ದೊಡ್ಡವರು ಆದಮೇಲೆ ಅರ್ಥವಾಗುತ್ತದೆ" ಎಂದು ಹೇಳುತ್ತ ಇದ್ದನು.

"ಚಿಕ್ಕವರಾದ ನಮಗೂ ಏಕೆ ಅರ್ಥ ಆಗಬಾರದು?" ಎಂದು ಅವು ಮರು ಪ್ರಶ್ನೆ ಹಾಕುತ್ತಿದ್ದವು.

ಅದಕ್ಕೂ ಅವನು ಬೇಸರಗೊಳ್ಳುತ್ತ ಇರಲಿಲ್ಲ.

"ನಿಮ್ಮ ಚಿಕ್ಕ ದೇಹಗಳಿಗೆ ಅಪಾಯ, ತಡಕೊಳ್ಳೋ ಶಕ್ತಿ ಇರುವುದಿಲ್ಲ ಮಕ್ಕಳೇ" ಎಂದು ಅವುಗಳ ಗಲ್ಲ ಹಿಂಡುತ್ತಿದ್ದನು.

ಹೀಗೇ ಹಲವಾರು ದಿನಗಳು ಕಳೆದವು.

ಒಂದು ದಿನ ಕುಳ್ಳ ಮನುಷ್ಯ ತನ್ನ ಹೆಂಡತಿಯೊಂದಿಗೆ ಬೇರೆ ಊರಿಗೆ ಹೋಗಬೇಕಾಗಿ ಬಂತು.

"ಬನ್ನಿ ಮಕ್ಕಳೇ?" ಎಂದು ಮಕ್ಕಳನ್ನು ಹತ್ತಿರ ಕರೆದನು.

"ಏನಪ್ಪಾಜೀ?" ಎಂದು ಅವು ಹತ್ತಿರ ಬಂದವು.

"ನೋಡಿ ಮಕ್ಕಳೆ ನಾವು ಇಬ್ಬರು ಕೆಲಸದ ನಿಮಿತ್ತ ಬೇರೆ ಊರಿಗೆ ಹೋಗುತ್ತಿರುವೆವು" ಎಂದು ಹೇಳಿದನು.

"ಯಾವಾಗ ಮರಳಿ ಬರುವಿರಿ?" ಎಂದು ಮಕ್ಕಳು ಕೇಳಿದವು.

"ಬರುವುದು ಏಳು ಅಥವಾ ಎಂಟು ದಿನಗಳಾಗಬಹುದು. ಆದರೆ ಒಂದು ಮಾತು ಮಕ್ಕಳೆ!" ಎಂದು ತಡೆದನು.

"ಏನು ಮಾತು ಅಪ್ಪಾಜಿ?" ಎಂದು ಕೇಳಿದವು ಮಕ್ಕಳು.

"ನೋಡಿ ನೀವು ಅಪ್ಪಿತಪ್ಪಿ ನನ್ನ ಕೋಣೆಗೆ ಹೋಗಕೂಡದು" ಎಂದು ಗದರಿಕೆ ಧ್ವನಿಯಲ್ಲಿ ಹೇಳಿದನು.

"ಆಗಲಿ ಅಪ್ಪಾಜಿ. ನೀವು ನಿಶ್ಚಿಂತೆಯಿಂದ ಹೋಗಿಬನ್ನಿ" ಎಂದು ಆ ಮುದ್ದು ಮಕ್ಕಳು ತಮ್ಮ ತಂದೆತಾಯಿಯರನ್ನು ಬೀಳುಕೊಟ್ಟವು.

ಮಕ್ಕಳ ಆನಂದಕ್ಕೆ ಪಾರವೇ ಇಲ್ಲ. ಇಡೀ ಮನೆಗೆ ತಾವೇ ಒಡೆಯರು. ಹೇಳುವವರು ಕೇಳುವವರು ಯಾರೂ ಇಲ್ಲ! ಅವು ಮೊದಲೇ ಎಳೆ ವಯಸ್ಸಿನ; ಎಳೆಮನಸ್ಸಿನ ಮಕ್ಕಳು. ನೋಡಲಿಕ್ಕೆ ತುಂಬ ಮುದ್ದಾಗಿದ್ದವು. ದಷ್ಟಪುಷ್ಟವಾಗಿ ಇದ್ದವು. ಅವುಗಳ ಕಣ್ಣ ಒಳಗಡೆ ಚುಕ್ಕಿಗಳಿದ್ದವು. ಕಣ್ಣ ಹುಬ್ಬು ಕಾಮನ ಬಿಲ್ಲಿನಂತೆ ಇದ್ದವು. ಅಲ್ಲದೆ ಅವು ಪಾದರಸಕ್ಕಿಂತ ಚುರುಕಾಗಿ ಇದ್ದವು.

ಸ್ವಲ್ಪ ತಡವಾಗಿ ಅವುಗಳಿಗೆ ಅಪ್ಪನ ಕೋಣೆ ನೆನಪಾಯಿತು. ಯಾವ ಕಾರಣಕ್ಕೂ ಕೋಣೆ ಪ್ರವೇಶಿಸಕೂಡದೆಂದು ಅಪ್ಪ ಅಪ್ಪಣೆ ಮಾಡಿರುವನು! ಅಂಥದ್ದು ಏನಿದ್ದೀತು ಒಳಗಡೆ ಮಕ್ಕಳಲ್ಲಿ ಕುತೂಹಲ ಎಂಬ ಮರವು ದೊಡ್ಡದಾಗಿ ಬೆಳೆಯಿತು. ಅದು ಹೂವು; ಕಾಯಿ ಹಣ್ಣು ಬಿಟ್ಟಿತು.

ಕೋಣೆ ಪ್ರವೇಶ ಮಾಡುವುದೆಂದು ಮಕ್ಕಳು ನಿರ್ಧರಿಸಿದವು. ಕೆಲಸದ ಹೆಂಗಸು ಬೇರೆ ಮನೆಯಲ್ಲಿ ಇರಲಿಲ್ಲ. ಬೆಕ್ಕಿನಂತೆ ಕಳ್ಳಹೆಜ್ಜೆ ಇಡುತ್ತ... ಇಡುತ್ತ ಆ ಕೋಣೆ ಬಳಿ ಸುಳಿದವು. ಅವುಗಳ ಲಘು ಪ್ರಯತ್ನಕ್ಕೆ ಬಾಗಿಲು ತೆರೆದುಕೊಂಡಿತು. ಮೆಲ್ಲಗೆ ಹೊಸ್ತಿಲು ಆಚೆ ಹೆಜ್ಜೆ ಇರಿಸಿದವು.

ಅಲ್ಲಿದ್ದ ವಸ್ತುಗಳನ್ನು ನೋಡಿ ಬೆರಗಾದವು. ಏನೇನೋ ವಸ್ತುಗಳು ಅಲ್ಲಿ ಇದ್ದವು. ಒಂದೊಂದು ವಸ್ತುವೂ ವಿಚಿತ್ರವೇ! ಒಂದೊಂದು ವಸ್ತುವನ್ನು ಕೈಗೆ ತೆಗೆದುಕೊಂಡು ನೋಡುತ್ತ; ಪರೀಕ್ಷಿಸುತ್ತ ಮುಂದೆ ಮುಂದೆ ಚಲಿಸಿದವು.

ಅವುಗಳ ಗಮನವನ್ನು ತನ್ನೆಡೆಗೆ ಸೆಳೆದ ವಸ್ತು ಸ್ವಲ್ಪ ವಿಚಿತ್ರವಾಗೇ ಇತ್ತು. ಅದು ಹೆಚ್ಚು ಆಕರ್ಷಕವಾಗಿರಲಿಲ್ಲ. ಅದು ಶಹನಾಯಿವಾದ್ಯದ ತರಹ ಉದ್ದಕೆ ಇತ್ತು. ಅದರ ಮೇಲೆಲ್ಲ ರಂಧ್ರಗಳು ಇದ್ದವು. ರಂಧ್ರಗಳಿಂದ ನೋಡಿದರೆ ಏನು ಕಂಡೀತು?



**ಗಾತ್ರ ಕಳೆದುಕೊಂಡ ಮಕ್ಕಳು**

ಎಂಬ ಕುತೂಹಲ ಮಕ್ಕಳಲ್ಲಿ ಚಿಗಿಯಿತು. ಅವು ಅದರ ಬಳಿಗೆ ನಡೆದವು. ಸಾಲಾಗಿ ನಿಂತವು. ಎಲ್ಲವೂ ಅದಕ್ಕೆ ಕೈ ಹಚ್ಚಿದವು. ಎತ್ತಿದವು ಒಟ್ಟಾಗಿ. ಭಾರವಾಗಿದ್ದರೂ ಅದು ಮೇಲಕ್ಕೆ ಎದ್ದಿತು. ತಲಾಕೆರಡೆರಡು ರಂಧ್ರಗಳನ್ನು ಆಯ್ದುಕೊಂಡವು. ಅದರೊಳಗೆ ಮೆಲ್ಲಗೆ ಇಣಿಕಿದವು.

ಕಣ್ಣಿಗೆ ಎದುರಾಗಿ ಕೋಲ್ಮಿಂಚು ಮಿಂಚಿದಂತಾಯಿತು.
ಎಂಥದೋ ಒಂದು ಭಾರಿ ಸದ್ದು ಕೇಳಿಸಿದಂತಾಯಿತು.
ಇಡೀ ಪ್ರಪಂಚವೇ ಅದರೊಳಗೆ ಅವಿತಿದೆ ಎಂದು ಭಾಸವಾಯಿತು.
ನೋಡುನೋಡುವಷ್ಟರಲ್ಲಿ ಆ ವಸ್ತು ದೀರ್ಘವಾಗಿ ಬೆಳೆಯಲಾರಂಭಿಸಿತು
ವಸ್ತು ಬೆಟ್ಟಕ್ಕಿಂತ ಭಾರವೆಂದು ಅನ್ನಿಸಿತು.

ಅದು ಹೇಗೋ ಕೈಯಿಂದ ಪುಸುಗಿ ಬಿಟ್ಟಿತು.
ನೋಡುತ್ತವೆ. ಬೆಟ್ಟದಂತಹ ಅದರ ಗಾತ್ರವೋ!
ಬಾಗಿಲುಗಳಿಗಿಂತ ದೊಡ್ಡದಾದ ಅದರ ರಂಧ್ರಗಳೋ!

ಮುದ್ದು ಮಕ್ಕಳು ಕಣ್ಣುಜ್ಜಿಕೊಂಡು ನೋಡಿದವು. ಕ್ರಮೇಣ ಅವಕ್ಕೆ ಗೊತ್ತಾದುದು ಏನೆಂದರೆ! ತಾವು ಗಾತ್ರ ಕಳೆದುಕೊಂಡಿರುವುದು! ತಾವೆಲ್ಲ ಇರುವೆಯ ದೇಹದ ನೂರನೆ ಒಂದು ಭಾಗದಷ್ಟು ಆಗಿ ಬಿಟ್ಟಿರುವೆವಲ್ಲಾ! ಎಷ್ಟೊಂದು ಮಜ ಇಹುದೀ ಕುಳ್ಳಾತಿ ಕುಳ್ಳ ಜೀವನ!

ಅಣುಗಾತ್ರದಷ್ಟು ಕುಗ್ಗಿ ಬಿಟ್ಟಿದ್ದ ಆ ಮಕ್ಕಳಿಗೆ ಪ್ರತಿಯೊಂದು ವಸ್ತು ಅದ್ಭುತವಾಗಿ ಗೋಚರಿಸತೊಡಗಿತು. ಒಂದು ಇಂಚು ಕ್ರಮಿಸುವುದು ಎಂದರೆ ಒಂದು ಮೈಲಿ ಕ್ರಮಿಸಿದಂತೆಯೇ ಎಂಬ ಭಾವನೆ ಬಂತು! ಈ ಅಣುಗಾತ್ರದ ಬದುಕನ್ನು ಎಷ್ಟು ಸಾಧ್ಯವೋ ಅಷ್ಟು ಸವಿಯಬೇಕು ಎಂದು ಅವು ನಿರ್ಧರಿಸಿದವು.

ಹಾಗೂ ಹೀಗೂ ಕೋಣೆಯ ಬಾಗಿಲ ಬಳಿಗೆ ಬಂದಿದ್ದವು. ಹೊಸ್ತಿಲನ್ನು ಪ್ರಯಾಸದಿಂದ ಹತ್ತಿ ಇಳಿದವು. ಅಷ್ಟರಲ್ಲಿ ಕೆಲಸದ ಹೆಂಗಸು ಬಂದು ಬಿಟ್ಟಿದ್ದಳು. ಮಕ್ಕಳೇ ಮಕ್ಕಳೇ ಎಂದು ಅವಳು ಕೂಗುತ್ತಿದ್ದಳು. "ಎಲ್ಲಿ ಹಾಳಾಗಿ ಹೋದಿರೇ ನನ್ನ ತಲೆನೋವುಗಳೇ" ಎಂದು ಶಪಿಸಿದಳು. ಆಕೆಗೇನು ಗೊತ್ತು ತಾವೆಲ್ಲ ಆಕೆಯ ಕಾಲಬುಡದಲ್ಲಿಯೇ ಇರುವುದು. ತೆಂಗಿನಮರಕ್ಕಿಂತಲೂ ಉದ್ದ ಇದ್ದ ಆಕೆ ತಮ್ಮನ್ನೂ; ತಮ್ಮ ತಂದೆತಾಯಿಯರನ್ನೂ ಶಪಿಸುತ್ತಿದ್ದಳು. ತಂದೆತಾಯಿ ಮರಳಿ ಬಂದ ಮೇಲೆ ಅದನ್ನೆಲ್ಲ ವಿವರಿಸಬೇಕೆಂದು ಅಣುಗಾತ್ರದ ಮಕ್ಕಳು ನಿರ್ಧರಿಸಿದವು. ಅಷ್ಟರಲ್ಲಿ ಏನಾಯಿತೆಂದರೆ ಕೆಲಸದ ಹೆಂಗಸು ಕೈಯಲ್ಲಿ ಪೊರಕೆ ಹಿಡಿದುಕೊಂಡಳು. ತಮ್ಮ ತಂದೆಯನ್ನು ಗೂಬೆಗೆ ಹೋಲಿಸಿದಳು; ತಾಯಿಯನ್ನು ಕಪ್ಪೆಗೆ ಹೋಲಿಸಿದಳು; ಮಕ್ಕಳನ್ನು ತೊಣಸೆ ಹುಳುಗಳಿಗೆ ಹೋಲಿಸಿದಳು. ಹೀಗೆ ಗೊಣಗುತ್ತ ಕಸ ಗುಡಿಸತೊಡಗಿದಳು.

ನೋಡುನೋಡುತ್ತಿದ್ದಂತೆ ಮಕ್ಕಳನ್ನೂ ಕಸದೊಂದಿಗೆ ಗುಡಿಸಿಬಿಟ್ಟಳು. ಅವು ಚೀರಿಕೊಂಡದ್ದು ಆಕೆಗೆ ಕೇಳಿಸಿದರೆ ತಾನೆ! ಕಸದೊಂದಿಗೆ ಮಕ್ಕಳನ್ನು ತುಂಬಿ ಕೈತೋಟದೊಳಗಡೆಗೆ ಚೆಲ್ಲಿ ಬಿಟ್ಟಳು. ಕಸದೊಳಗೆ ಮಕ್ಕಳು ಉರುಳಾಡುತ್ತ ಮೇಲೆದ್ದವು.

ಕೈತೋಟ ಅವುಗಳಿಗೆ ತುಂಬಾ ಮಜಾ ನೀಡಿತು. ತಾವು ಪುಟು ಪುಟು ಓಡಾಡುತ್ತಿರುವುದು ದೊಡ್ಡದಾದ ಛಾವಣಿ ಕೆಳಗೆ ಎಂದು ಅದುವರೆಗೆ ಭಾವಿಸಿದ್ದವು. ಆದರೆ ಅದು ಛಾವಣಿ ಆಗಿರಲಿಲ್ಲ. ಅದು ಒಂದು ಗರುಕೆಯ ಎಲೆಯ ಎಸಳು ಆಗಿತ್ತು. ಅಲ್ಲಿ ಇದ್ದ ಒಂದು ಬಿಂದು ತೃಣವೂ ಭಾರಿ ವೃಕ್ಷದಂತೆಯೂ; ಒಂದು ಒಂದು ಗಿಡವೂ ಭಾರಿ ಗಾತ್ರದ ದೇವದಾರು ಮರದಂತೆಯೂ ಗೋಚರಿಸಿದವು. ಇಡೀ ಕೈತೋಟವೇ ದೊಡ್ಡ ಕಾಡಿನಂತೆ ವೇಷ ಧರಿಸಿ ಬಿಟ್ಟಿತ್ತು. ಅಜ್ಜಿ ಹೇಳುತ್ತ ಇದ್ದ ಕತೆಗಳ ಅರಣ್ಯವೇ ಇದಾಗಿರಬಹುದೆಂದು ಮಕ್ಕಳು ಭಾವಿಸಿದವು.

ನೋಡು ಅಲ್ಲಿ ದೈತ್ಯ ಗಾತ್ರದ ಹದ್ದು ಹಾರಿಬರುತ್ತಿದೆ ಎಂದು ಒಂದು ಮಗು ಹೇಳಿತು. ಭಾರಿಗಾತ್ರದ ಬಣ್ಣಬಣ್ಣದ ರೆಕ್ಕೆಗಳನ್ನು ಬಡಿಯುವಾಗ ಬಿರುಗಾಳಿಯೇ ಏಳುತ್ತಿತ್ತು. ನೋಡುವಷ್ಟರಲ್ಲಿ ಅದು ಹಾರಿ ಬಂದು ತೀರ ಸನಿಹದಲ್ಲಿ ಕೂತಿತು. ಆದರೆ ಅದು ಹದ್ದು ಆಗಿರದೆ ಪತಂಗವಾಗಿತ್ತು. ಮಕ್ಕಳೆಲ್ಲ ಓಡಿ ಹೇಗೋ ಅದರ ರೆಕ್ಕೆ ಮೇಲೆ ಏರಿದವು. ಅದು ಸುಂದರವೂ; ನುಣುಪೂ ಆದ ರೆಕ್ಕೆ ಆಟದ ಮೈದಾನದಂತೆ ಇತ್ತು. ಮುದ್ದು ಮಕ್ಕಳು ಅದರ ಮೇಲೆ ಮುದ್ದು ಮುದ್ದಾದ ಆಟ ಆಡಿದವು. ಅದು ಇನ್ನೇನು ಹಾರುತ್ತದೆ ಎನ್ನುವಾಗ ಅದರ ಡುಬ್ಬದ ಸೂಕ್ಷ್ಮವಾದ ಎಳೆಗೆ ಅವುಚಿಕೊಂಡವು. ಅದು ಹಾರಲು ಆರಂಭಿಸಿತು. ಹಾರುತ್ತ ಹಾರುತ್ತ ಹೂವೊಂದರ ಮೇಲೆ ಕೂತುಕೊಂಡಿತು. ಅದರ ಕೊಕ್ಕಿನ ಮೂಲಕ ಮಕ್ಕಳು ಹೂವಿನ ಒಳಗೆ ಇಳಿದವು. ಹೂವಿನ ಪರಾಗದ ಹುಡಿಯನ್ನು ಮೈಗೆ ಲೇಪಿಸಿಕೊಂಡವು. ಹುಡಿಯೊಳಗೆ ಉರುಳಾಡಿದವು. ಉರುಳಾಡಿ ಉರುಳಾಡಿ ಸುಸ್ತಾದವು. ಹೇಗಪ್ಪಾ ಹೊರಗಡೆ ಹೋಗುವುದು ಎಂದು ಚಿಂತಿಸಿದವು. ಅದೇ ಹೊತ್ತಿಗೆ ದುಂಬಿಯೊಂದು ಹಾರಿಬಂದು ಹೂವಿನ ಮೇಲೆ ಕೂತಿತು,

ಕೊಕ್ಕನ್ನು ಹೂವಿನ ಆಳಕ್ಕೆ ಇಳಿಬಿಟ್ಟಿತು. ಆ ಕೊಕ್ಕನ್ನು ಹಿಡಿದುಕೊಂಡು ಮೇಲೆ ಬಂದವು. ಹೇಗೋ ಪಕಳೆ ಮೇಲಿಂದ ಹೂವಿನಿಂದ ಕೆಳಗಡೆ ಉರುಳಿದವು. ಆದರೆ ಅವುಗಳ ದೇಹಕ್ಕೆ ಗಾಯವಾಗಲೇ ಇಲ್ಲ. ಅದೇ ಹೊತ್ತಿಗೆ ದೂರದಲ್ಲಿ ಗೊದ್ದಿಗವೊಂದು ದೈತ್ಯಪ್ರಾಣಿ ಥರ ಬರುವುದನ್ನು ನೋಡಿದವು. ಅದು ಇನ್ನೇನು ತಮ್ಮನ್ನು ತಿಂದೇ ಬಿಡುವುದು ಎಂದು ಭಾವಿಸಿದವು. ಆದರೆ ಅದು ಹಾಗೆ ಮಾಡಲಿಲ್ಲ.

ಅದು ಬಂದು ಮಕ್ಕಳಿಗೆ ಒದಗಿರುವ ದುಸ್ಥಿತಿ ಕುರಿತು ವಿಚಾರಿಸಿತು. ಈ ಗತಿ ಬರಬಾರದಾಗಿತ್ತು ಎಂದು ಮಮ್ಮಲನೆ ಮರುಗಿತು. ಸಮಸ್ಯೆ ಕುರಿತು ವಿಚಾರಿಸಿತು. ಮಕ್ಕಳು ತುಂಬ ಹಸಿವೆ ಆಗಿದೆ ಎಂದು ಹೇಳಿದವು. ಈಗಲೇ ಆಹಾರ ತರುವೆನೆಂದು ಹೋಯಿತು. ಸ್ವಲ್ಪ ಹೊತ್ತಿನಲ್ಲಿ ಒಂದು ಅನ್ನದ ಅಗುಳನ್ನು ಉರುಳಿಸಿಕೊಂಡು ಬಂದಿತು. ತಿನ್ನಿರಿ ಎಂದು ಹೇಳಿತು. ದೊಡ್ಡ ಕೋಡುಗಲ್ಲಿನಂತಿರುವ ಅನ್ನದ ಅಗುಳನ್ನು ತಿನ್ನುವುದು ಹೇಗೆಂದು ಅವು ಚಿಂತಿಸಿದವು. ಅದಕ್ಕೆ ಮುತ್ತಿದವು. ಗಬರಿ ಗೆಬರಿಕೊಂಡು ತಿನ್ನಲು ಆರಂಭಿಸಿದವು. ಹೊಟ್ಟೆ ತುಂಬ ತಿಂದವು. ಆದರೆ ಅನ್ನದ ಅಗುಳು ಸವೆಯಲಿಲ್ಲ. ಬಾಯಾರಿಕೆಯಾಯಿತು. ಆದರೆ ಎಲ್ಲೂ ನೀರಿರಲಿಲ್ಲ. ಹುಲ್ಲಿನ ಎಸಳ ಮೇಲೆ ನೀರಿನ ಹನಿಯೊಂದು ಇತ್ತು. ಅದು ದೊಡ್ಡ ಗುಂಡು ಕಲ್ಲಿನ ಥರ ಇತ್ತು. ಅದರ ಕೆಳಗೆ ಆಸೆ ಕಣ್ಣಿನಿಂದ ನೋಡುತ್ತ ನಿಂತವು. ಬಿರುಗಾಳಿಯಂತೆ ಬೀಸಿದ ತಂಗಾಳಿಗೆ ಅದು ಉರುಳಿತು. ದೊಡ್ಡ ಜಲಪಾತದಂತೆ ಉರುಳಿದ ರೀತಿಗೆ ಮಕ್ಕಳು ತೊಯ್ದು ಬಿಟ್ಟವು. ಹೇಗೋ ಬಾಯಾರಿಕೆ ತೀರಿಸಿಕೊಂಡವು.

ಅವುಗಳಿಗೆ ತಮ್ಮ ಅಣುಗಾತ್ರ ತುಂಬ ಬೇಸರ ತರಿಸಿತು. ಗಾತ್ರ ಕಳೆದುಕೊಂಡಿರುವುದು ಸರಿ ಅಲ್ಲ ಎಂದು ಅನ್ನಿಸಿತು. ಎಷ್ಟು ದಿನ ಅಂತ ಹೀಗೆ ಇರುವುದು. ತಂದೆತಾಯಿಯರನ್ನು ನೆನಪಿಸಿಕೊಂಡವು. ಅವರು ತೋರಿಸುತ್ತಿದ್ದ ಪ್ರೀತಿ; ಮಮತೆ ನೆನಪಿಸಿಕೊಂಡವು. ತಂದೆತಾಯಿಯರ ಪ್ರೀತಿ ಮುಂದೆ ಇದೆಲ್ಲವೂ ತೃಣ ಸಮಾನವೆನ್ನಿಸಿತು. ಗಾತ್ರ ಕಳೆದುಕೊಂಡರೆ ಇರುವೆ ಕೂಡ ಹೆದರಿಸುತ್ತದೆ. ಚಿಟ್ಟೆ ಹದ್ದಿನಂತೆ

ಕಾಣಿಸುತ್ತದೆ. ಅಯ್ಯೋ ಎಷ್ಟೊಂದು ಭಯಾನಕವಾಗಿರುವುದಲ್ಲ ತಮ್ಮ ಸ್ಥಿತಿ. ಇದಕ್ಕೆ ಕೊನೆ ಇಲ್ಲವೇ? ಮಕ್ಕಳೆಲ್ಲ ಅಪ್ಪಾ... ಅಮ್ಮಾ ಎಂದು ಅಳತೊಡಗಿದವು.

"ಅಳುತ್ತ ಕೂತರೆ ತಂದೆತಾಯಿ ಸಿಗುವುದಿಲ್ಲ. ನಿಮ್ಮ ಮನೆಗೆ ಹೋಗಿ" ಎಂದು ಗೊದ್ದಿಗ ಹೇಳಿತು.

"ಅಷ್ಟು ದೂರ ನಡೆಯುವುದು ತಮ್ಮಿಂದ ಸಾಧ್ಯವಿಲ್ಲ" ಎಂದು ಮಕ್ಕಳು ಅಸಹಾಯಕತೆ ಪ್ರಕಟಿಸಿದವು.



**ಗೊದ್ದಗಳ ಮೇಲ ಮಕ್ಕಳ ಸವಾರಿ**

ಸರಿ ಹಾಗಾದರೆ ಮೇಲೆ ಹತ್ತಿ ಕುಳಿತುಕೊಳ್ಳಿ ಎಂದಿತು. ಮಕ್ಕಳು ಮೇಲೇರಿ ಕೂತುಕೊಂಡವು. ಗೊದ್ದಿಗ ಸುಮಾರು ಹೊತ್ತು ನಡೆದೂ ನಡೆದು ಅವರ ಮನೆ ತಲುಪಿತು. ಕೆಳಕ್ಕಿಳಿಸಿತು.

ನಿಮ್ಮನ್ನು ಹೆತ್ತವರು ಗುರುತಿಸುವಂತಾಗಲಿ ಎಂದು ಶುಭ ಹಾರೈಸಿ ಅಲ್ಲಿಂದ ವಾಪಾಸ್ಸಾಯಿತು.

ಮಕ್ಕಳು ತಮಗೆ ತೀರ ಸನಿಹದಲ್ಲಿ ತಂದೆತಾಯಿಯರು ಇರುವುದನ್ನು ಗುರುತಿಸಿದವು. ಅವರು "ಮಕ್ಕಳೇ ಮಕ್ಕಳೇ ಎಲ್ಲಿರುವಿರಿ ನನ್ನ ಮುದ್ದು ಮಕ್ಕಳೇ" ಎಂದು ಅಳುತ್ತಿರುವುದನ್ನು ಕೇಳಿಸಿಕೊಂಡವು.

"'ಅಪ್ಪಾ... ಅಮ್ಮಾ ಇಗೋ ಇಲ್ಲೆ ಇರುವೆವು!" ಎಂದು ಕೂಗಿದವು. ಆದರೆ ಅವುಗಳ ಮಾತು ದೊಡ್ಡವರಿಗೆ ಕೇಳಿಸಲಿಲ್ಲ.

ಮಕ್ಕಳು ಹಿಂಜರಿಯಲಿಲ್ಲ. ಸರಸರ ತಂದೆತಾಯಿಗಳ ಕಾಲನ್ನು ಏರತೊಡಗಿದವು. ಹಾಗೆ ಪುತುಪುತು ಉದುರಿಬಿಡುತ್ತಿದ್ದವು. ಏರುತ್ತಿದ್ದವು. ಮತ್ತೆ ಉದುರುತ್ತಿದ್ದವು.

ಇದೆಂಥ ಹೆತ್ತವರು, ನಮ್ಮ ಸ್ಪರ್ಶ ಕೂಡ ಗುರುತಿಸುತ್ತಿಲ್ಲವಲ್ಲ ಈ ದೊಡ್ಡವರು ಎಂದು ಬೇಸರಪಟ್ಟುಕೊಂಡವು. ಆದರೆ ಅವು ಪ್ರಯತ್ನದಿಂದ ಹಿಂದೆಗೆಯಲಿಲ್ಲ. ಹಾಗೂಹೀಗೂ ಮೇಲೇರಿದವು. ಎದೆ ತಲುಪಿದವು. ಮುಖ ತಲುಪಿದವು. ಕಣ್ಣ ರೆಪ್ಪೆಯ ಮೇಲೆ ನಿಂತು ಬಗ್ಗಿ ಬಗ್ಗಿ ನೋಡಿದವು. ನೋಡಿ ಹೆತ್ತವರೇ ಈಗಲಾದರೂ ನಾವು ಕಾಣಿಸುವುದಿಲ್ಲವೆ! ಎಂದು ಕೂಗಿದವು. ನಂತರ ಕಿವಿ ತಲುಪಿ "ಅಮ್ಮಾ ಅಮ್ಮಾ" ಎಂದು ಕೂಗಿದವು. ಆದರೆ ಅವುಗಳ ಕೂಗು ಹೆತ್ತವರಿಗೆ ಕೇಳಿಸಲಿಲ್ಲ. ಅಲ್ಲಿಂದ ಮತ್ತೆ ನೆಲದ ಮೇಲೆ ಉದುರಿದವು.

ಕೆಲಸದ ಹೆಂಗಸಿಗೇನು ಗೊತ್ತು! ಪಾಪ! ಕಸದೊಂದಿಗೆ ಮಕ್ಕಳನ್ನು ಗುಡಿಸಿ ಹೊರಗಡೆ ಎಸೆಯುತ್ತಿದ್ದಳು, ಮುದ್ದುಮುದ್ದಾದ ಮಕ್ಕಳು ತೆವಳುತ್ತ ತೆವಳುತ್ತ ಹೆತ್ತವರನ್ನು ತಲುಪುತ್ತಿದ್ದವು. ಕಳೆದುಹೋಗಿರುವ ಮಕ್ಕಳ ವ್ಯಸನದಲ್ಲಿ ಅನ್ನ ನೀರು ಬಿಟ್ಟು ಕೂತಿದ್ದ ಹೆತ್ತವರು ಅವುಗಳನ್ನು ಗುರುತಿಸುತ್ತಿರಲಿಲ್ಲ.

ಮಕ್ಕಳು ತಂದೆತಾಯಿಗಳಿಗಾಗಿ ಅಳುವುದು

ತಂದೆತಾಯಿಗಳು ಮಕ್ಕಳಿಗಾಗಿ ಹಂಬಲಿಸುವುದು

ಇದು ಹೀಗೇ ಮುಂದುವರಿದಿತ್ತು ಎನ್ನುವಲ್ಲಿಗೆ ಈ ಕಥೆ ಸಮಾಪ್ತಿ ಆಯಿತು.

# ಪತಂಗಗಳು

ಅದು ಒಂದು ಊರು. ಎಲ್ಲ ಊರುಗಳ ಹಾಗೆ ಅದು ಕೂಡ, ಎಲ್ಲ ಊರುಗಳಂತೆ ಆ ಊರಿಗೂ ರಸ್ತೆಗಳು ಇರಲಿಲ್ಲ. ಎಲ್ಲ ಊರುಗಳಂತೆ ಆ ಊರಿಗೂ ಸರಕಾರಿ ಶಾಲೆ ಎಂಬುದು ಇರಲಿಲ್ಲ. ಹೀಗಾಗಿ ಆ ಊರಿಗೆ ಯಾರೂ ಬರುವುದು, ಹೋಗುವುದು ಮಾಡುತ್ತ ಇರಲಿಲ್ಲ. ಆ ಊರಿಗೆ ಅಪರಿಚಿತರು ಯಾರೂ ಬರುತ್ತ ಇರಲಿಲ್ಲ. ಆ ಊರು ಬೆಟ್ಟದ ತಪ್ಪಲಲ್ಲಿ ಇತ್ತು. ಆದರೆ ಅಲ್ಲಿ ಕಾಡು ಇರಲಿಲ್ಲ. ಆ ಊರು ಪಕ್ಕ ನದಿ ಒಂದು ಇತ್ತು. ಆದರೆ ಅಲ್ಲಿ ನೀರು ಇರಲಿಲ್ಲ. ಎಂದೋ ನೀರು ಇತ್ತು ಎಂಬುದಕ್ಕೆ ಮರಳಿನಲ್ಲಿ ಮೀನುಗಳ, ಏಡಿಗಳ, ಮಳೆಹುಳಗಳ ಕಳೇಬರಗಳು ಇದ್ದವು. ಆದರೂ ಆ ಊರು ತುಂಬ ಸುಂದರವಾಗೇ ಇತ್ತು. ಆ ಊರಿನ ಜನ ಎಂದೂ ಬಸ್ಸು ನೋಡಿದವರು ಅಲ್ಲ. ಆ ಊರಿನ ಜನರು ಎಂದೂ ರೈಲುಗಾಡಿ ನೋಡಿದವರೂ ಅಲ್ಲ. ಅಂದಮೇಲೆ ವಿಮಾನ ನೋಡುವುದು ಹೇಗೆ ಸಾಧ್ಯ? ಆದ್ದರಿಂದ ಆ ಊರಿನ ಜನ ಯಾವ ವಿಷಯ ಕುರಿತೂ ತಲೆ ಕೆಡಿಸಿಕೊಂಡವರು ಅಲ್ಲವೇ ಅಲ್ಲ! ಸುಖ ಬಂದಾಗ ಹಿಗ್ಗದೆ ದುಃಖ ಬಂದಾಗ ಕುಗ್ಗದೆ ನೆಮ್ಮದಿಯಿಂದ ಇದ್ದರು. ಹಾಸಿಗೆ ಇದ್ದಷ್ಟೇ ಕಾಲು ಚಾಚುವರು, ದುಪ್ಪಟ ಇದ್ದಷ್ಟೇ ಹೊದ್ದು ಮಲಗುವವರು ಅವರು ಆಗಿದ್ದರು.

ಆ ಊರನ್ನು ಮುಖ್ಯವಾಗಿ ಎರಡು ಭಾಗ ಮಾಡಬಹುದೋ ಏನೋ. ಮೇಲಿನ ಕೇರಿ ಮತ್ತು ಕೆಳಗಿನ ಕೇರಿ ಅಂತ. ಮೇಲಿನ ಕೇರಿಯಲ್ಲಿ ಗೌಡರು, ಕುಲಕರ್ಣಿಯವರು, ಶಾನಭೋಗರು, ಪುರೋಹಿತರು ಅಂತ ಇದ್ದರು. ಅವರಿಗೆಲ್ಲ ಬೇಕಾದಷ್ಟು ಭೂಮಿಕಾಣೆ ಇತ್ತು. ದಪ್ತರುಗಳು ಇದ್ದವು. ಗುಡಿಗುಂಡಾರಗಳು ಇದ್ದವು. ಆದ್ದರಿಂದ ಹೊರಗಡೆ ಹೋಗುತ್ತ ಇರಲಿಲ್ಲ. ಅವರ ದೇಹಗಳ ಮೇಲೆ ರವಿಯ ಬಿಸಿಲಿನ ಕಿರಣಗಳು ಬೀಳುತ್ತ ಇರಲಿಲ್ಲ. ಬಿಸಿಲಲ್ಲಿ ಹೋದಾಗ ತಪ್ಪದೆ ಕೊಡೆ ಏರಿಸುತ್ತ ಇದ್ದರು. ರಾತ್ರಿ ಹೊತ್ತು ಬೆಳದಿಂಗಳೂ ಅವರ ಶರೀರದ ಮೇಲೆ ಬೀಳುತ್ತಾ ಇರಲಿಲ್ಲ. ರಾತ್ರಿ ಹೋಗುವಾಗ

ಬೆಳದಿಂಗಳು ಬೀಳದಂತೆ ಕೊಡೆ ಏರಿಸುತ್ತ ಇದ್ದರು. ಅವರ ದೇಹದ ಮೇಲೆ ಬೆವರು ಮೂಡುತ್ತ ಇದ್ದುದು ಸುಖವಾಗಿ ಊಟ ಮಾಡುವಾಗ ಮಾತ್ರ. ಅವರು ವಾಸಿಸುತ್ತ ಇದ್ದ ಮನೆಗಳೋ ಬಹಳ ಎತ್ತರ ಇದ್ದವು. ದೊಡ್ಡ ಕಲ್ಲುಗಳಿಂದ ಕಟ್ಟಲ್ಪಟ್ಟಿದ್ದವು. ಮನುಷ್ಯರಿಗೆ ನಿಲುಕದಂತೆ ಎತ್ತರದಲ್ಲಿ ಕಿಟಕಿಗಳಿದ್ದವು.

ಅವರ ಮನೆಯ ಮಹಿಳೆಯರು ಅಲ್ಲಿ ಪಿಳಿಪಿಳಿ ಕಣ್ಣು ಬಿಡುತ್ತ ಕೂತಿರುತ್ತ ಇರುತ್ತಿದ್ದರು. ಪುರುಷರು ಮನೆ ಮುಂದಿನ ಅಟವಾಳಿಗೆಯಲ್ಲಿ ಕೂತಿರುತ್ತ ಇರುತ್ತ ಇದ್ದರು. ವ್ಯವಹಾರದ ಮಾತು ಆಡುತ್ತ ಇದ್ದರು. ಮಾತು ಎಂದರೆ ಹಣ; ಹಣ ಎಂದರೆ ಮಾತು, ಹೀಗಿರುತ್ತಿತ್ತು ಅವರ ವ್ಯವಹಾರವು. ಹೀಗೆ ಬರುತ್ತ ಇದ್ದ ಹಣವನ್ನು ಏನು ಮಾಡುತ್ತ ಇದ್ದರೆಂದರೆ, ಹಣ ನೀಡಿ ಚಿನ್ನ ಪಡೆಯುತ್ತ ಇದ್ದರು. ಹಣವನ್ನು ಮತ್ತು ಚಿನ್ನವನ್ನು ಎಲ್ಲಿ ಇಡುತ್ತ ಇರುತ್ತಿದ್ದರೆಂದರೆ ದೊಡ್ಡ ಕಬ್ಬಿಣದ ತಿಜೋರಿಯಲ್ಲಿ. ಅದು ಬಹಳ ದಪ್ಪ, ಶಿವನ ಮೂರನೆಯ ಕಣ್ಣಿಗೂ ಅದನ್ನು ತೆರೆಯುವ ಶಕ್ತಿ ಇರಲಿಲ್ಲ. ಅವರಿಗೆ ಸದಾಕಾಲ ಅದರ ಬಗೆಗೇ ಧ್ಯಾನ. ಅದರ ಬೆಳವಣಿಗೆಗಾಗಿ ಅವರು ಅವರ ಟೋಪಿಯನ್ನು ಇವರ ತಲೆ ಮೇಲೂ; ಇವರ ತಲೆ ಮೇಲಿನ ಟೋಪಿಯನ್ನು ಅವರ ತಲೆ ಮೇಲೂ ಹಾಕುತ್ತ ಇದ್ದರು.

ಅವರು ಸದಾ ಧರ್ಮ ಕುರಿತು ಮಾತು ಆಡುತ್ತ ಇರುತ್ತಿದ್ದರು. ಧರ್ಮ ಪಾರಾಯಣ ಮಾಡುತ್ತ ಇದ್ದರು. ತಿಳಿದವರು ಆಗಿದ್ದರು, ಪಾಪ ಯಾವುದು! ಪುಣ್ಯ ಯಾವುದು! ಎಂಬುದು ಅವರಿಗೆ ತಿಳಿದಿತ್ತು. ಧರ್ಮದ ಹೆಸರಿನಲ್ಲಿ ಅಧರ್ಮಿಗಳು ಆಗಿದ್ದರು. ಪುಣ್ಯದ ಹೆಸರಿನಲ್ಲಿ ಪಾಪ ಮಾಡುತ್ತ ಇದ್ದರು. ಅವರು ಮಾಡುತ್ತ ಇದ್ದ ಪಾಪ ಕ್ಷಮಿಸಲು ದೇವರುಗಳು ಇದ್ದವು. ಅವುಗಳೆಲ್ಲ ಅವರ ಪರವಾಗಿ ಇರುತ್ತಿದ್ದವು. ಮಂಗಳಾರತಿ, ಪೂಜೆ, ಅಭಿಷೇಕಗಳಿಗೆ ಅವು ನಗುತ್ತ ಇದ್ದವು. ದಕ್ಷಿಣೆ ಕೊಟ್ಟರೆ ಅವು ಅವರ ಪರ ವಕಾಲತ್ತು ಮಾಡುತ್ತ ಇದ್ದವು. ಆದ್ದರಿಂದ ಅವರಿಗೆ ನರಕದ ಭಯ ಇರಲಿಲ್ಲ. ಸತ್ತ ಮೇಲೆ ತಾವು ನಾಕಕ್ಕೆ ಹೋಗುವೆವು ಎಂದು ಅವರು ನಂಬಿದ್ದರು.

ಇರುಳು ಆದ ಮೇಲೆ ಅವರು ಮಲಗಲು ಹೋಗುತ್ತ ಇದ್ದರು. ಮಲಗಲು ಮಂಚ, ಮಂಚದ ಮೇಲೆ ಮೆತ್ತನೆಯ ಗಾದಿ, ಒಳ್ಳೆಯ, ಶುಭ್ರ ಸೊಳ್ಳೆ ಪರದೆಯೊಳಗೆ ಅವರು ಉರುಳುತ್ತ ಇದ್ದರು. ನಿದ್ರೆ ಬರಲಿ ಎಂದು ಸುಗಮ, ದುರ್ಗಮ ಸಂಗೀತ ಕೇಳುತ್ತ ಇದ್ದರು. ಸುಗಂಧಭರಿತ ದುಪ್ಪಟಿ ಹೊದೆಯುತ್ತ ಇದ್ದರು. ಭಗವಂತನ ನಾಮಸ್ಮರಣೆ ಮಾಡುತ್ತಿದ್ದರು. ಉರುಳಾಡುತ್ತ ಇದ್ದರು, ಆದರೂ ನಿದ್ರಾದೇವಿ ಒಲಿಯುತ್ತ ಇರಲಿಲ್ಲ. ಬಹಳ ತಡವಾಗಿ ನಿದ್ದೆ ಬರುತ್ತ ಇತ್ತು. ನಿದ್ದೆಯೊಳಗೆ ಕೆಟ್ಟ ಕನಸುಗಳನ್ನು ಕಾಣುತ್ತ ಇದ್ದರು. ಬೆಚ್ಚಿ ಬೀಳುತ್ತ ಇದ್ದರು. ಏನು ಏನೋ ಕನವರಿಸುತ್ತ ಇದ್ದರು. ತಮ್ಮ ದೇಹವನ್ನು ಎರಡೂ ಕೈಗಳಿಂದ ತುರಿಸಿಕೊಳ್ಳುತ್ತ ಇದ್ದರು. ಅವರು ಮಲಗಿದರೂ ನಿದ್ದೆ ಬರುತ್ತ ಇರಲಿಲ್ಲ. ಜಠರ ಅನ್ನನಾಳ ತುಂಬುವಂತೆ ಊಟ ಮಾಡಿದರೂ ಅದು ಸುಲಭವಾಗಿ ಅರಗುತ್ತ ಇರಲಿಲ್ಲ. ಹೀಗಾಗಿ ಅವರ ದೇಹಗಳು ಹಲವು ರೋಗಗಳ ಗೂಡುಗಳು ಆಗಿದ್ದವು. ತಮ್ಮ ದೇಹಗಳೊಂದಿಗೆ ಹೆಸರಾಂತ ವೈದ್ಯರ ಬಳಿಗೆ ಹೋಗುತ್ತ ಇದ್ದರು. ಸೂಜಿ ಮಾಡಿಸಿಕೊಳ್ಳುತ್ತ ಇದ್ದರು. ಬಗೆಬಗೆಯ ಮಾತ್ರೆಗಳನ್ನು ನುಂಗುತ್ತ ಇದ್ದರು. ಆದರೂ ಅವರು ಬದುಕಿರುತ್ತ ಇದ್ದರು. ಇದು ಸೋಜಿಗದ ಸಂಗತಿಯೂ ಆಗಿತ್ತು.

ಆದರೆ ಆ ಊರಿನ ಕೆಳಗೇರಿಗಳು ಇವುಗಳಿಗೆ ತದ್‌ವಿರುದ್ಧ ಆಗಿದ್ದವು. ಅಲ್ಲಿ ಕುರುಬರು, ಬೇಡರು, ಕೊರಚರು, ಮಾದಿಗರು ಮುಂತಾದವರು ವಾಸವಾಗಿರುತ್ತ ಇದ್ದರು. ಅವರಾರಿಗೂ ಭೂಮಿಕಾಣಿ ಇರಲಿಲ್ಲ. ದೇವರು ಅವರಿಗೆಲ್ಲ ಸುಡುಗಾಡಿನಲ್ಲಿ ಭೂಮಿ ದಯಪಾಲಿಸಿದ್ದನು. ಆ ಭೂಮಿ ಅಳತೆ ಉದ್ದ ಆರು ಮೊಳ, ಅಗಲ ಮೂರು ಮೊಳ ಅವರಿಗೆ ಅದೇ ಹೆಮ್ಮೆಯ ಸಂಗತಿ ಆಗಿತ್ತು. ಅದಕ್ಕೆ ಪಟ್ಟಗಳಾಗಲೀ, ದಫ್ತರುಗಳು ಆಗಲೀ ಇರಲಿಲ್ಲ. ಅಲ್ಲೂ ಗುಡಿಗುಂಡಾರಗಳಿದ್ದವು. ಗವಿಗಳಂತೆ, ಗೂಡುಗಳಂತೆ, ಅವುಗಳ ಒಳಗಡೆ ದೇವತೆಗಳು ವಾಸವಾಗಿದ್ದವು. ಕತ್ತಲಲ್ಲಿ ಕಪ್ಪಗೆ ಇದ್ದವು. ಅವುಗಳಿಗೆ ಒಂದು ಆಕಾರ ಎಂಬುದು ಇರಲಿಲ್ಲ. ಅವುಗಳಲ್ಲಿ ಬಹುಪಾಲು ಹೆಣ್ಣು ದೇವತೆಗಳು, ಅವುಗಳ

ನಾಮಾಂಕಿತ ಆದರೋ ಸುಂಕುಲಮ್ಮ, ದುರುಗಮ್ಮ, ಚವುಡಮ್ಮ, ಎಲ್ಲಮ್ಮ, ಹುಲಿಗೆಮ್ಮ, ಅವು ಸದಾ ದುರುಗುಟ್ಟಿ ನೋಡುತ್ತ ಇದ್ದವು. ಸದಾ ನಾಲಗೆ ಕೆಂಪಗೆ ಚಾಚಿರುತ್ತ ಇದ್ದವು. ಒಂದು ಒಂದು ಹೆಣ್ಣು ದೇವತೆಗೂ ಮೀಸೆಗಳು ಇರುತ್ತ ಇದ್ದವು. ಆದರೆ ಗಡ್ಡ ಮಾತ್ರ ಇರುತ್ತ ಇರಲಿಲ್ಲ. ಅವು ಸದಾ ರಕ್ತ ರಕ್ತ ಮಾಂಸ ಮಾಂಸ ಅನ್ನುತ್ತ ಇದ್ದವು. ಆದರೆ ಅವುಗಳನ್ನು ಜನ ಕೇರು ಮಾಡುತ್ತ ಇರಲಿಲ್ಲ.

ಜನರು ವಾಸ ಮಾಡುತ್ತ ಇದ್ದ ಮನೆಗಳು ಎಂದರೆ ಗುಡಿಸಲುಗಳು, ಝೋಪಡಿಗಳು, ಅವು ಅಷ್ಟು ಉದ್ದ ಇರಲಿಲ್ಲ, ಅಷ್ಟು ಅಗಲ ಇರಲಿಲ್ಲ. ಆದರೂ ಅದರೊಳಗೆ ಅವರ ನಿತ್ಯ ಕರ್ಮಗಳು ನಡೆಯುತ್ತ ಇದ್ದವು. ರವಿಯ ಕಿರಣಗಳು ಅದರ ಒಳಗೆ ಧಾರಾಳವಾಗಿ ಬೀಳುತ್ತಿದ್ದವು. ಗಾಳಿ ಒಳಗೂ ಬೀಸುತ್ತ ಇತ್ತು. ಮಳೆ ಬಂದರೆ ಒಳಗೆಲ್ಲ ನೀರು. ಅವರು ಒಳಗೆ ಇದ್ದರೂ ಒಂದೇ ಆಗಿತ್ತು, ಹೊರಗೆ ಇದ್ದರೂ ಒಂದೇ ಆಗಿತ್ತು. ಅವರದು ಮೊದಲೇ ಕಪ್ಪು ಚರ್ಮ. ಅದು ಹುಟ್ಟುವಾಗಲೇ ದಪ್ಪಗೆ ಇರುತ್ತ ಇತ್ತು. ಆದ್ದರಿಂದ ಬಿರುಬಿಸಿಲಲ್ಲಿ ಇದ್ದರೂ ಬೆಳದಿಂಗಳಲ್ಲಿ ಇರುವೆವೇನೋ ಎಂಬಂತೆ ಇರುತ್ತ ಇದ್ದರು. ಅವರ ದೇಹಗಳಿಂದ ಬೆವರು ಧಾರಾಕಾರವಾಗಿ ಸುರಿಯುತ್ತ ಇತ್ತು. ಆ ಬೆವರಿನಿಂದ ಭೂಮಿ ಫಲವತ್ತಾಗಿ ಇರುತ್ತಿತ್ತು. ಅದೆಲ್ಲ ಮೇಲಿನ ಕೇರಿಯವರದಾಗಿತ್ತು. ಅವರು ತಮ್ಮ ದುಡಿಮೆಗೆ ಕಡಿಮೆ ಫಲ ಪಡೆಯುತ್ತ ಇದ್ದರು. ಅದರಿಂದ ದವಸ ಖರೀದಿಸುತ್ತ ಇದ್ದರು. ದವಸದಿಂದ ಮಣ್ಣಿನ ಮಡಕೆಗಳಲ್ಲಿ ಆಹಾರ ಬೇಯಿಸಿಕೊಳ್ಳುತ್ತ ಇದ್ದರು. ಆಹಾರ ಅವರ ಹೊಟ್ಟೆಗಳಿಗೆ ಸಾಕಾಗುತ್ತ ಇರಲಿಲ್ಲ.

ಆದರೂ ಅವರು 'ಹೋಽಽಬ್ಬ' ಎಂದು ತೇಗುತ್ತ ಇದ್ದರು. ನಂತರ ಅಂಗಳದಲ್ಲಿ ನೆರೆಯುತ್ತಿದ್ದರು. ಕೋಲಾಟ ಆಡುತ್ತ ಇದ್ದರು, ಪದ ಹಾಡುತ್ತ ಇದ್ದರು, ಕೇಕೆ ಹಾಕುತ್ತ ಇದ್ದರು, ಜೋರಾಗಿ ಕೂಗುತ್ತ ಇದ್ದರು. ತಮ್ಮ ದೇಹಗಳಿಗಿಂತಲೂ ಭಾರದ ಕಲ್ಲು ಗುಂಡುಗಳನ್ನು ಸಲೀಸಾಗಿ ಎತ್ತುತ್ತ ಇದ್ದರು, ಇಳಿಸುತ್ತ ಇದ್ದರು. ಅವರು

ಎಂದೂ ಶಾಲೆ ನೋಡಿದವರು ಆಗಿರಲಿಲ್ಲ. ಆದರೂ ಅವರು ಪದ ಕಟ್ಟಬಲ್ಲವರು ಆಗಿದ್ದರು. ಆದರೂ ನರ್ತಿಸಬಲ್ಲವರು ಆಗಿದ್ದರು. ಅವರು ಎಂದೂ ಓನಾಮ ತಿದ್ದಿದವರು ಆಗಿರಲಿಲ್ಲ. ಆದರೂ ಅವರು ತುಂಬ ಜಾಣರಾಗಿ ಇದ್ದರು. ದೊಡ್ಡ ದೊಡ್ಡ ಮನೆಗಳನ್ನು ಕಟ್ಟಬಲ್ಲವರು ಆಗಿದ್ದರು. ಮಣ್ಣಿನಿಂದ ಮಡಕೆಗಳನ್ನು ಮಾಡಬಲ್ಲವರು ಆಗಿದ್ದರು. ಕಟ್ಟಿಗೆಯಿಂದ ಕುಂಟೆ, ಮೇಳೆಗಳನ್ನು ತಯಾರಿಸಬಲ್ಲವರು ಆಗಿದ್ದರು. ಆಗಸದಲ್ಲಿ ಹಕ್ಕಿಯಂತೆ ಹಾರಬಲ್ಲವರು ಆಗಿದ್ದರು. ನೀರಿನಲ್ಲಿ ಮೀನಿನಂತೆ ಈಜಬಲ್ಲವರು ಆಗಿದ್ದರು. ಅವರಿಗೆ ಅವರ ಭಾವನೆಗಳೇ ಸಿರಿಸಂಪತ್ತು ಆಗಿದ್ದವು. ಆ ಭಾವನೆಗಳನ್ನು ಅವರು ತಮ್ಮ ದೇಹಗಳೆಂಬ ತಿಜೋರಿ ಒಳಗೆ ಇಟ್ಟು ಇರುತ್ತ ಇದ್ದರು. ಅವನ್ನು ಅವರು ತಮ್ಮ ಪಂಚ ಇಂದ್ರಿಯಗಳ ಮೂಲಕ ಕೊಡುತ್ತ ಇದ್ದರು, ಬೇರೆಯವರಿಂದ ಪಡೆಯುತ್ತ ಇದ್ದರು. ಅವರು ಟೋಪಿ ಧರಿಸುತ್ತ ಇರಲಿಲ್ಲ. ಬೇರೆಯವರಿಗೆ ಹಾಕುತ್ತ ಇರಲಿಲ್ಲ. ಅವರಿಗೆ ಧರ್ಮದ ಬಗ್ಗೆ ತಿಳಿದು ಇರಲೂ ಇಲ್ಲ. ಅವರಿಗೆ ಪಾಪಪುಣ್ಯಗಳ ಬಗ್ಗೆ ತಿಳಿದು ಇರಲೂ ಇಲ್ಲ. ಅವರು ಧರ್ಮ ಪಾರಾಯಣ ಮಾಡುತ್ತ ಇರಲಿಲ್ಲ.

ಆದರೆ ಅವರು ಧರ್ಮದ ಬಗ್ಗೆ ಕಥೆ ಕಟ್ಟಲು ಬಲ್ಲವರು ಆಗಿದ್ದರು. ಪಾಪಪುಣ್ಯಗಳ ಬಗೆಗೆ ಕಥನ ಕವನಗಳನ್ನು ಸೊಗಸಾಗಿ ಹಾಡಲು ಬಲ್ಲವರು ಆಗಿದ್ದರು. ಆದ್ದರಿಂದ ಅವರಿಗೆ ದೇವತೆಗಳನ್ನು ರಮಿಸುವುದು ಬೇಕಿರಲಿಲ್ಲ. ಮಂಗಳಾರತಿ, ಪೂಜೆ, ಅಭಿಷೇಕಗಳ ಗೊಡವೆಯಿಂದ ದೂರ ಇರುತ್ತ ಇದ್ದರು. ಅವರಿಗೆ ತೀರ್ಥ, ಪ್ರಸಾದಗಳ ಹಂಗು ಇರಲಿಲ್ಲ. ಅವರಿಗೆ ಆಭರಣಗಳ ಆಸೆ ಇರಲಿಲ್ಲ. ಅವರಿಗೆ ಅವರ ಪಂಚ ಇಂದ್ರಿಯಗಳೇ ಆಭರಣಗಳು ಆಗಿದ್ದವು. ಅವರಿಗೆ ಉಡುಪುಗಳ ಭ್ರಮೆ ಇರಲಿಲ್ಲ. ಅವರಿಗೆ ಅವರ ಚರ್ಮವೇ ಉಡುಪು ಆಗಿತ್ತು. ಅವರಿಗೆ ಮಲಗಲು ಹಾಸಿಗೆ ಬೇಕಿರಲಿಲ್ಲ. ಭೂಮಿಯೇ ಅವರಿಗೆ ಹಾಸಿಗೆಯಾಗಿತ್ತು. ಅವರಿಗೆ ದುಪ್ಪಟಿ ಬೇಕಿರಲಿಲ್ಲ. ಅವರಿಗೆ ಆಕಾಶವೇ ದುಪ್ಪಟಿ ಆಗಿತ್ತು. ಮಲಗುತ್ತಲೇ ಗಾಢವಾದ ನಿದ್ದೆ ಮಾಡುತ್ತ ಇದ್ದರು. ಅವರ ಮೇಲೆ ಪ್ರೀತಿ ಇದ್ದುದರಿಂದಲೋ ಅಥವಾ ಕಚ್ಚಿದರೆ ತಾವು ಎಲ್ಲಿ ಸಾಯುವೆವೋ

ಎಂದು ಸೊಳ್ಳೆಗಳಾಗಲೀ, ಇತರೆ ಕ್ರಿಮಿಕೀಟಗಳಾಗಲೀ ಅವರ ಬಳಿ ಸುಳಿಯುತ್ತ ಇರಲಿಲ್ಲ. ಅವರಿಗೆ ಸುಂದರವಾದ ಕನಸುಗಳು ಬೀಳುತ್ತ ಇದ್ದವು. ಕನಸುಗಳಲ್ಲಿ ಅವರು ದೇವಲೋಕಗಳಿಗೆ ಎಲ್ಲಾ ಹೋಗಿ ಬರುತ್ತ ಇದ್ದರು. ಅಪ್ಸರೆಯರಿಂದ ಸೇವೆ ಮಾಡಿಸಿಕೊಳ್ಳುತ್ತ ಇದ್ದರು.

ರವಿ ಉದಯಕ್ಕೆ ಮೊದಲೇ ಏಳುತ್ತ ಇದ್ದರು. ಕೂಲಿನಾಲಿಗೆ ಹೋಗುತ್ತ ಇದ್ದರು. ಅವರು ಏನು ತಿಂದರೂ ಕರಗಿ ರಕ್ತ ಆಗುತ್ತಿತ್ತು. ಯಾವ ರೋಗವೂ ಅವರ ಬಳಿಗೆ ಸುಳಿಯುತ್ತ ಇರಲಿಲ್ಲ. ಆದ್ದರಿಂದ ಅವರಿಗೆ ಯಾವ ವೈದ್ಯರ ಹಂಗೂ ಇರಲಿಲ್ಲ. ನೆಗಡಿ ಜಡ್ಡು ಇಂಥ ಸಣ್ಣಪುಟ್ಟ ರೋಗಗಳು ಬಂದಾಗ ಅವರು ಏನು ಮಾಡುತ್ತ ಇದ್ದರೆಂದರೆ ತಮ್ಮ ದೇವತೆಗಳಿಗೆ ನಡೆದುಕೊಳ್ಳುತ್ತ ಇದ್ದರು. ಸಾವು ಬರುವೆನೆಂದರೆ 'ಬಾ' ಈ ದೇಹ ಹೊತ್ತುಕೊಂಡು ಹೋಗು ಎಂದು ಚಿಂತೆ ಇಲ್ಲದೆ ಸಾಯುತ್ತ ಇದ್ದರು. ಇದು ಕೂಡಾ ಸೋಜಿಗದ ಸಂಗತಿ ಆಗಿತ್ತು.

ಒಂದು ದಿನ ಕೆಳಗೇರೆಯ ಕೆಲವು ಜನರು ಕೂಲಿ ಕೆಲಸಕ್ಕೆ ಒಂದು ಕಡೆ ಹೋದರು. ಅಲ್ಲಿ ಕೆಲಸ ಮಾಡಿ ಬರುವಾಗ ಒಂದು ಸೋಜಿಗ ಕಂಡರು. ಅಲ್ಲಿ ಜಮೀನಿಗೆ ಒಡೆಯರಾದ ಕೆಲವರು ಒಂದು ನಮೂನೆಯ ಸೊಪ್ಪು ಬೆಳೆಯುತ್ತ ಇದ್ದರು. ಅದು ತುಂಬ ಹಸಿರಾಗಿ ಇತ್ತು. ಆ ಸೊಪ್ಪನ್ನು ಒಂದು ಕಡೆ ಹಾಕುತ್ತ ಇದ್ದರು. ಅಲ್ಲಿ ಕೆಂಪು ಹುಳಗಳು ಇದ್ದವು. ಅವು ಸಾಸಿವೆ ಕಾಳಿನಷ್ಟು ಗಾತ್ರದವು. ಅವು ಸೊಪ್ಪನ್ನು ಗಬಗಬ ತಿಂದು ಮುಗಿಸುತ್ತಿದ್ದವು.

ಅರೆ! ಅವು ಹೇಗೆ ತಿನ್ನುತ್ತಿರುವವು ಎಂದು ಇವರಿಗೆ ಅಚ್ಚರಿ, ಕುತೂಹಲವೇ ಕುತೂಹಲ. ಹಾಗೆ ಇವರು ನೋಡುವುದನ್ನು ಮುಂದುವರಿಸಿದರು. ಸೊಪ್ಪು ತಿನ್ನುತ್ತಿದ್ದ ಹುಳುಗಳು ನಿಮಿಷದಿಂದ ನಿಮಿಷಕ್ಕೆ ಬೆಳೆಯುತ್ತ ಇದ್ದವು. ಅವು ಸುಮ್ಮನೆ ಬೆಳೆಯುತ್ತ ಇದ್ದವು. ಸಾಸಿವೆ ಕಾಳಿನಷ್ಟು ಇದ್ದ ಅವು ಅವರೆಕಾಳಿನಷ್ಟು ಆದವು. ಅವರೆಕಾಳಿನಷ್ಟು

ಇದ್ದವು ಇಂಚುದ್ದ ಆದವು. ಹಾಗೆ ಅವು ತೋರು ಬೆರಳುದ್ದ ಆದವು. ಅವಕ್ಕೆ ಮೈತುಂಬ ಕಾಲುಗಳು. ಆದರೆ ಅವಕ್ಕೆ ಇದ್ದುದು ಒಂದು ಬಾಯಿ, ಒಂದು ತಿಕ ಮಾತ್ರ.

ನಡುವೆ ಅವು ಕೆಲವು ಜ್ವರಗಳಿಂದ ನರಳುತ್ತ ಇದ್ದವು. ಆಗ ಸೊಪ್ಪು ತಿನ್ನುತ್ತ ಇರಲಿಲ್ಲ. ಮತ್ತೆ ಚೇತರಿಸಿಕೊಳ್ಳುತ್ತ ಇದ್ದವು. ಮತ್ತೆ ತಿನ್ನುವುದನ್ನು ಆರಂಭಿಸುತ್ತ ಇದ್ದವು.

ಅವು ಮುಂದೇನು ಆಗುತ್ತವೆ ಎಂಬ ಕುತೂಹಲ ಇವರದು. ಇವರು ಜಮೀನಿಗೆ ಒಡೆಯರು ಆದವರನ್ನು ಕೇಳಲು, ಅವರು

"ನೋಡಿರಪ್ಪ, ನೋಡಿರಿ, ಅವುಗಳು ತಮ್ಮ ಒಡಲಿನಿಂದ ಅಂಟುಅಂಟಾದ ರಸ ಸ್ರವಿಸುವವು. ಆ ರಸ ದಾರದ ಹಾಗೆ, ಅದರಿಂದ ತಮ್ಮ ಸುತ್ತ ತಾವೇ ಗೂಡು ಕಟ್ಟಿಕೊಳ್ಳುವವು."

"ಆಮೇಲೆ ಏನಾಗುವವು?"

"ಗೂಡನ್ನು ಸೀಳಿಕೊಂಡು ಚಿಟ್ಟೆಗಳಾಗಿ ಹಾರಿ ಹೋಗುವವು, ನೀವೇ ನೋಡುವಿರಂತೆ"

"ಓಹೋ ಹಾಗೋ! ಸರಿ!" ಇವರು ನೋಡುವುದನ್ನು ಮುಂದುವರಿಸಿದರು. ಇವರು ನೋಡುತ್ತಿರುವಂತೆ ಅವು ಗೂಡುಗಳನ್ನು ಕಟ್ಟಿಕೊಂಡವು. ಕೆಲವು ದಿನಗಳಾದ ಮೇಲೆ ಚಿಟ್ಟೆಗಳಾಗಿ ಹೊರಬಂದವು. ಮೇಲೆ ಹಾರಿಹೋದವು.

ಇವರಿಗೆ ಅಚ್ಚರಿಯೋ ಅಚ್ಚರಿ. ಅರೆ ಹೌದಲ್ಲ! ಎಂದು ಉದ್ಗರಿಸಿದರು.

ಇವರು ಅಂದಿನಿಂದ ತುಂಬ ಮಂಕಾದರು. ತಮಗೆ ತಾವೇ ಬದುಕನ್ನು ಕುರಿತು ಚಿಂತಿಸಿದರು. ಚಿಂತಿಸಿದಂತೆ;

ಬದುಕು ಅರ್ಥ ಕಳೆದುಕೊಂಡಿರುವಂತೆ ಕಂಡಿತು.
ಬದುಕು ವ್ಯಾಕರಣ ಕಳೆದುಕೊಂಡ ವಾಕ್ಯದಂತೆ ಕಂಡಿತು
ಬದುಕು ಅರ್ಥಕಳೆದುಕೊಂಡ ಶಬ್ದದಂತೆ ಕಂಡಿತು
ಬದುಕು ಮುಖವಿಲ್ಲದ ಮುಂಡದಂತೆ ಕಂಡಿತು

ತಮ್ಮ ಬದುಕಿನ ಬಗ್ಗೆ ತಮಗೇ ಬೇಸರವಾಯಿತು. ಇಷ್ಟು ದಿನ ಇಂಥ ಬದುಕನ್ನು ಬದುಕಿದೆವಲ್ಲಾ ಎಂದು ಚಿಂತಿಸಿದರು. ಇದರಿಂದ ಬಿಡುಗಡೆ ಪಡೆಯುವುದು ಹೇಗಪ್ಪಾ ಎಂದು ಯೋಚಿಸಿದರು.

ಕೊನೆಗೆ ಅವರಿಗೆ ಒಂದು ವಿಷಯ ಹೊಳೆಯಿತು.

ಅದೆಂದರೆ ಆ ಸೊಪ್ಪು ತಿಂದ ಹುಳುಗಳು ಬೆಳೆದು ಚಿಟ್ಟೆ ಆಗಬಹುದಾದರೆ ನಾವು ಏಕೆ ಆಗಬಾರದು! ಹುಳುಗಳೂ ಜೀವಿಗಳೇ! ನಾವೂ ಜೀವಿಗಳೇ!

ಆದ್ದರಿಂದ ಒಂದು ಕೈ ನೋಡೇ ಬಿಡುವುದು ಎಂದು ನಿರ್ಧರಿಸಿದರು.

ಆ ನಿರ್ಧಾರ ಒಬ್ಬ ವ್ಯಕ್ತಿಯದು ಆಗಿರಲಿಲ್ಲ. ಒಂದು ಗುಂಪಿನದು ಆಗಿತ್ತು. ಅವರು ಎಲ್ಲ ಸೇರಿಕೊಂಡು ಮುಂದೆ ಏನು ಮಾಡಿದರು ಎಂದರೆ -

ಇರುಳಿನಲ್ಲಿ ಗುಂಪುಗುಂಪಾಗಿ ಹೊರಟರು. ಸೊಪ್ಪು ಬೆಳೆದಿದ್ದ ಹೊಲಗದ್ದೆಗಳಿಗೆ ಮುಗಿ ಬಿದ್ದರು. ಸೊಪ್ಪನ್ನು ತರಿದುಕೊಂಡರು. ಅದನ್ನು ಹೊತ್ತುಕೊಂಡು ಒಂದು ದೊಡ್ಡ ಬಯಲಿಗೆ ಬಂದರು. ಗಬಗಬ ತಿನ್ನತೊಡಗಿದರು. ಕ್ರಮೇಣ ಮಾತು ಕಳೆದುಕೊಂಡರು. ವರ್ತಮಾನ ಮರೆತರು. ದೇಹದ ಚಲನೆ ಕಳೆದುಕೊಂಡರು. ಅವರ ದೇಹಗಳಲ್ಲಿ ಕೆಲಸ ಮಾಡುತ್ತ ಇದ್ದವೆಂದರೆ ಎರಡೇ ಅಂಗಗಳು. ಒಂದು ಬಾಯಿ ಇನ್ನೊಂದು ತಿಕ.

ಒಂದನೆಯ ಜ್ವರ ಕಳೆದರು. ಮತ್ತೆ ಚೇತರಿಸಿಕೊಂಡರು. ಎರಡನೆಯ ಜ್ವರ ಬಂತು ಮತ್ತೆ ಚೇತರಿಸಿಕೊಂಡರು. ಹೀಗೆ ಇಪ್ಪತ್ತು ಮತ್ತು ಒಂದು ದಿನಗಳನ್ನು ಕಳೆದರು. ನಂತರ ಸೊಪ್ಪು ತಿನ್ನುವುದು ಬಂದ್ ಆಯಿತು.

ಒಂದು ರೀತಿಯ ಮಬ್ಬಿನಿಂದ ಉರುಳಾಡಲು ಆರಂಭಿಸಿದರು. ಒಡಲ ಒಳಗೆ ಒಂದು ರೀತಿಯ ಸಂಕಟವೋ ಸಂಕಟ. ಅದು ಸುಖದ ಸಂಕಟ. ಅದು ಬಿಡುಗಡೆಯ ಸುಖದ ಸಂಕಟ.

ಅವರು ತಮ್ಮ ಬಾಯಿಂದ ಅಂಟಾದ ದ್ರವ ಸ್ರವಿಸಲು ಆರಂಭಿಸಿದರು. ಅದರಿಂದ ತಮ್ಮ ಸುತ್ತ ತಾವೇ ಒಂದು ಗೂಡು ಕಟ್ಟಲು ಆರಂಭಿಸಿದರು.

-೨-

ಇತ್ತ ಊರಲ್ಲಿ ಮೇಗಳ ಗೇರೆಯಲ್ಲಿ ದೊಡ್ಡವರಿಗೆ ಆತಂಕ. ತಮ್ಮ ಉಪ್ಪರಿಗೆ ಮನೆಗಳಲ್ಲಿ ಕಸ ಬಳಿಯುವವರೆಲ್ಲಿ? ತಮ್ಮ ದನ ಕೊಟ್ಟಿಗೆಯಲ್ಲಿ ಸೆಗಣಿ ಬಳಿಯುವವರು ಎಲ್ಲಿ? ತಮ್ಮ ಕಾಲುಗಳಿಗೆ ಜೋಡು ಮಾಡಿಕೊಡುವವರು ಎಲ್ಲಿ? ತಮ್ಮ ಗಡ್ಡ ಮೀಸೆ ತೆಗೆವವರು ಎಲ್ಲಿ? ತಮಗೆ ಮಡಕೆ ಮಾಡಿಕೊಡುವವರು ಎಲ್ಲಿ? ತಮ್ಮ ಹೊಲಗಳಲ್ಲಿ ಕೆಲಸ ಮಾಡುವವರು ಎಲ್ಲಿ?

ಅವರ ಕೋಟಿ ಪ್ರಶ್ನೆಗಳಿಗೆ ಉತ್ತರ ಕೊಡುವವರು ಯಾರು? ಅವರು ಮೊದಲೇ ಕೆಲಸ ಮಾಡಲು ಅರಿಯರು. ಅವರು ಹೇಳಿಕೇಳಿ ಜಮೀನಿಗೆ ಒಡೆಯರು. ಅವರು ಹೇಳಿ ಕೇಳಿ ಗಂಟೆ, ಜಾಗಟೆಗೆ ಒಡೆಯರು. ಅವರು ಹೇಳಿ ಕೇಳಿ ಮಂತ್ರಗಳಿಗೆ ಒಡೆಯರು.

ಅವರು ಎಲ್ಲರೂ ಸೇರಿಕೊಂಡರು. ಒಟ್ಟಾಗಿ ಕೆಳಗೇರೆಗೆ ಹೋದರು. ಕೇರಿಗೆ ಕೇರಿಯೇ ಬಿಕೋ ಅನ್ನುತ್ತಿತ್ತು. ಹಟ್ಟಿ, ಝೋಪಡಿಗಳ ಸೂರಿನಿಂದ ಹೊಗೆ ಕಾಣಲಿಲ್ಲ. ಎಲ್ಲಿ ಹೋದರು ಇವರು? ತಮ್ಮ ಚಾಕರಿ ಮಾಡುವುದು ಪುಣ್ಯದ ಕಾರ್ಯ ಆಗಿತ್ತು ಅವರಿಗೆ. ತಮ್ಮ ಸೇವೆ ಮಾಡದೆ ಹೋದರೆ ಅವರಿಗೆ ರೌರವ ನರಕ ಪ್ರಾಪ್ತ ಸಿಗುವುದಲ್ಲ! ಎಂದು ಮೇಲಿನ ಕೇರಿಯವರು ಮಮ್ಮಲನೆ ಮರುಗಿದರು.

ಅವರಿಂದ ಸೇವೆ ಮಾಡಿಸಿಕೊಳ್ಳದೆ ಇದ್ದರೆ ತಾವು ಎಲ್ಲರು ಅನಾಗರಿಕರಾಗುವೆವು ಎಂದುಕೊಂಡರು. ಅವರು ಅತಳ, ವಿತಳ, ರಸಾತಳ, ಪಾತಾಳದಲ್ಲಿ ಎಲ್ಲಿ ಇದ್ದರೂ ಸರಿಯೇ ಹುಡುಕಿ ತರುವುದು ಎಂದು ನಿರ್ಧರಿಸಿದರು.

ಅವರು ಹುಡುಕಲು ಹೊರಟರು. 'ಕಂಕುಳಲ್ಲಿ ಮಗು ಇಟ್ಟುಕೊಂಡು ಊರೆಲ್ಲ ಹುಡುಕಿದಳಂತೆ' ಎಂಬ ಗಾದೆಯಂತೆ ಆಗಿತ್ತು ಅವರ ಹುಡುಕಾಟ. ದಟ್ಟವಾದ ಮರಗಿಡಗಳ ನಡುವೆ ಇದ್ದ ಬಯಲು ಅವರ ನೋಟಕ್ಕೆ ನಿಲುಕುವುದಾದರೂ ಹೇಗೆ? ಕೊನೆಗೂ ಹುಡುಕಿಯೇ ಬಿಟ್ಟರು. ಕಾಲ ಮಿಂಚಿತ್ತು. ಅಷ್ಟು ಹೊತ್ತಿಗೆ ಆಗಲೇ ಕೆಳಗೇರಿಯ ಜನರು ತಮ್ಮ ಸುತ್ತ ಗೂಡುಗಳನ್ನು ಕಟ್ಟಿಕೊಂಡು ಇದ್ದರು.

ಒಂದು ಒಂದು ಗೂಡು ನಾಲ್ಕರಿಂದ ಆರು ಮೊಳದವರೆಗೆ ಇತ್ತು. ಪ್ರತಿ ಒಂದು ಗೂಡು ಬಂಗಾರದಿಂದ ಮಾಡಿದೆ ಏನೋ ಎನ್ನುವಂತೆ ಇತ್ತು. ರವಿಕಿರಣಗಳಿಗೆ ಥಳಥಳ ಹೊಳೆಯುತ್ತ ಇತ್ತು. ಅದರಿಂದ ಕಂಪನದ ಅಲೆಗಳು ಬರುತ್ತ ಇದ್ದವು.

ಜಮೀನಿನ ಒಡೆಯರು ಗೂಡನ್ನು ಅಲ್ಲಾಡಿಸಲು ಯತ್ನಿಸಿದರು. ಆದರೆ ಸಾಧ್ಯ ಆಗಲಿಲ್ಲ. ಓಹೋ ಸೇವಕರು ಎಲ್ಲರೂ ಇದರ ಒಳಗೆ ಅವಿತುಕೊಂಡುಬಿಟ್ಟಿರುವರು! ಇವರ ಹೃದಯ ಕರಗುವಂತೆ ಮಾತಾಡಬೇಕು ಎಂದು ಮಾತಾಡಿದರು.

ಹೆಸರು ಹಿಡಿದು ಕೂಗಿದರು, ಮಾರುತ್ತರ ಬರಲಿಲ್ಲ. ತಮ್ಮಿಂದ ಅಗಲಿದರೆ ರೌರವ ನರಕ ಪ್ರಾಪ್ತಿ ಆಗುವುದು ಎಂದರು, ಮಾರುತ್ತರ ಬರಲಿಲ್ಲ. ಮುಂದೆ ಚೆನ್ನಾಗಿ ನೋಡಿಕೊಳ್ಳುವೆವು ಎಂದರು. ಮಾರುತ್ತರ ಬರಲಿಲ್ಲ.

ಹೀಗೆ ಜಮೀನಿಗೆ ಒಡೆಯರಾದವರು ಆಡಿದ ಯಾವ ಮಾತೂ ಗೂಡಿನೊಳಗೆ ಇರುವವರಿಗೆ ತಲುಪಲೇ ಇಲ್ಲ. ಅಥವಾ ತಲುಪಿದರೂ ಅವರು ಉತ್ತರ ಕೊಡಲು ಸಿದ್ಧರಿರಲಿಲ್ಲ.

ಜಮೀನಿನ ಒಡೆಯರು ನೋಡುನೋಡುತ್ತ ಇದ್ದಂತೆ ಗೂಡುಗಳು ವಿಚಿತ್ರವಾಗಿ ಕಂಪಿಸತೊಡಗಿದವು. ನಂತರ ಗೂಡುಗಳು ಬಿರಿಯಲು ಆರಂಭಿಸಿದವು. ಸೀಳಿದ ಗೂಡುಗಳ ಒಳಗಿನಿಂದ ವಿಚಿತ್ರ ಆಕೃತಿಗಳು ಹೊರಬರಲು ಆರಂಭಿಸಿದವು. ಅವು ಚಿಟ್ಟೆಗಳು ಆಗಿದ್ದವು. ರುಂಡ ಮಾತ್ರ ಮಾನವರ ತಲೆ, ಮುಂಡವೆಲ್ಲ ಪತಂಗವೇ, ಬಣ್ಣಬಣ್ಣದ ಸುಂದರ ರೆಕ್ಕೆಗಳು ಇದ್ದವು.

ಆ ಚಿಟ್ಟೆಗಳು ಜಮೀನಿನ ಒಡೆಯರನ್ನು ನೋಡಿದವು. ಮುಗುಳುನಕ್ಕವು. ಚಿಟ್ಟೆಯ ಭಾಷೆಯಲ್ಲಿ ಅವರು ಮಾತಾಡಿದರು, ಅದು ಅರ್ಥವಾಗಲಿಲ್ಲ.

'ನೋಡಿರಿ, ನೀವು ಜಮೀನಿಗಷ್ಟೆ ಒಡೆಯರು, ನಿಮ್ಮ ಒಡೆತನದ ಭೂಮಿಯನ್ನು ಅಳೆಯಬಹುದು, ಆದರೆ ಅದು ಕ್ಷಣಿಕ, ಅದು ನಶ್ವರ! ಆದರೆ ನಾವಾದರೋ ವಿಶಾಲವಾದ ಆಗಸಕ್ಕೆ ಒಡೆಯರು, ಬಯಲಿಗೆ ಯಜಮಾನರು. ನಮ್ಮ ಆಗಸದಲ್ಲಿ ತಾರೆಗಳುಂಟು, ಗ್ರಹಗಳುಂಟು, ನಿಹಾರಿಕೆಗಳು ಉಂಟು, ಸೂರ್ಯ, ಚಂದ್ರರು ಉಂಟು, ಅವೆಲ್ಲ ನಮ್ಮ ಗೆಳೆಯರು. .ನಮಗೆ ನಾಕನರಕಗಳ ಭಯವಿಲ್ಲ. ಹಸಿವು ಬಾಯಾರಿಕೆಗಳ ಹಂಗಿಲ್ಲ, ನಮ್ಮ ಆ ಬಯಲಲ್ಲಿ ಹಾದಿಗಳಿಲ್ಲ, ರಸ್ತೆಗಳು ಇಲ್ಲ. ತಿಳಿಯಿತೇ ಮೂಢರೇ' ಎಂದು ಚಿಟ್ಟೆಗಳು ಕೂಗಿ ಕೂಗಿ ಹೇಳಿದವು.

ಜಮೀನಿನ ಒಡೆಯರು ಹಿಡಿದೇ ಬಿಡುವೆವು! ಎಂದು ಕೈ ಹಾಕಿದರು. ಆದರೆ ಅವು ಸಿಗಬೇಕಲ್ಲ.

ಮಾರುದ್ದದ ರೆಕ್ಕೆ ಬಿಚ್ಚಿದವು. ಮುಗಿಲಿಗೆ ಜಿಗಿದವು. ನೋಡುತ್ತ ಇದ್ದಂತೆಯೇ ಅವು ಹಾರುತ್ತ, ಹಾರುತ್ತ ಬಯಲಕಡೆ ಸಾಗಿದವು. ಅವುಗಳನ್ನು ಸೂರ್ಯನು ಕಿರಣಗಳ ಮೂಲಕ ಸ್ವಾಗತಿಸಿದನು. ಅವುಗಳು ಕಾಮನಬಿಲ್ಲುಗಳಂತೆ ಹೊಳೆಯತೊಡಗಿದವು.

ಅರೆ ಇದು ಎಂಥ ಸೋಜಿಗ, ತಮ್ಮ ಬಳಿ ದುಡಿಯುತ್ತಿದ್ದ ಸೇವಕರು ಬಣ್ಣದ ಚಿಟ್ಟೆಗಳು ಆಗಿ ಹಾರಿದರಲ್ಲ! ಆ ಕಪ್ಪು ಜನರು ಪತಂಗಗಳು ಆದರೆ

ಕೆಂಪು ಜನರಾದ ನಾವು ಊಜಿ ನೊಣಗಳು ಏಕೆ ಆಗಬಾರದು! ಎಂದು ಜಮೀನಿನ ಒಡೆಯರು ಯೋಚಿಸಿದರು.

ಅವರು ಊಜಿನೊಣಗಳ ರೂಪ ಧರಿಸಲು ಕೆಲವು ನಿಮಿಷಗಳು ಹಿಡಿದವು.



ಪತಂಗಗಳು ಮತ್ತು ಊಜಿ ನೊಣಗಳು

ಈಗಲೇ ಹಾರುವೆವು. ಪತಂಗಗಳ ಹೊಟ್ಟೆ ಬಗೆವೆವು ಎಂದು ಅವು ನಿರ್ಧರಿಸಿದವು. ಅವು ಕೂಡ ಹಾರಿದವು. ಅವುಗಳದು ಮೊದಲೇ ಪುಟ್ಟ ರೆಕ್ಕೆಗಳು. ಉದ್ದೇಶ ಕ್ಷುಲ್ಲಕ. ಆದ್ದರಿಂದ ಎತ್ತರಕ್ಕೆ ಹಾರುವ ಶಕ್ತಿ ಅವುಗಳಿಗೆ ಎಲ್ಲಿಯದು!

ಪತಂಗಗಳು ಊಜಿನೊಣಗಳ ಕಡೆ ಅಯ್ಯೋ ಪಾಪ! ಎಂಬಂತೆ ನೋಡಿದವು. ರೆಕ್ಕೆ ಸೋತು ಊಜಿನೊಣಗಳು ಭೂಮಿಯ ಕಡೆ ಪುತುಪುತನೆ ಉದುರಿದವು.

ಪತಂಗಗಳು ಹಾರುತ್ತ ಹಾರುತ್ತ ಸಾಗಿದವು. ಕರಗಿ ಕರಗಿ ತಾರೆಗಳಾದವು. ಅವು ಬಯಲಲ್ಲಿ, ಮುಗಿಲಲ್ಲಿ ಶಾಶ್ವತ ಸ್ಥಾನ ಪಡೆದವು.

* * *



ನಮ್ಮ ಬಹುಸಂಖ್ಯಾತ ಸಮುದಾಯ ಅನಕ್ಷರಸ್ಥರೇ ಹೊರತು ಅವಿದ್ಯಾವಂತರಲ್ಲ. ನೃಪತುಂಗ ಹೇಳುವಂತೆ ಅವರು "ಚದುರರ್ ನಿಜದಿಂ ಕುರಿತೋದದೆಯುಂ ಕಾವ್ಯ ಪ್ರಯೋಗ ಪರಿಣತ ಮತಿಗಳ್". ಅನುಭವದಲ್ಲಿ, ವಿವೇಕದಲ್ಲಿ, ವ್ಯವಹಾರದಲ್ಲಿ, ತಿಳುವಳಿಕೆಯಲ್ಲಿ ಆ ಜನ ಚದುರರು. ಹೀಗೆಂದು ಅವರನ್ನು ಅಕ್ಷರದಲಿತರನ್ನಾಗಿಯೂ ಉಳಿಸುವಂತಿಲ್ಲ. ಅವರಲ್ಲಿ ಅಕ್ಷರ ಕಲಿಯುವ ಸಾಮರ್ಥ್ಯವಿದೆ. ಕಲಿಸುವ ಹೊಣೆ ಸರ್ಕಾರಗಳ, ವಿಶ್ವವಿದ್ಯಾಲಯಗಳ ಮೇಲಿದೆ. ಈ ನಿಟ್ಟಿನಲ್ಲಿ ದೇಶದಾದ್ಯಂತ ಸಾಕ್ಷರತಾ ಆಂದೋಲನ ನಡೆಯುತ್ತಿದೆ. ಆದರೆ ಈ ಅಕ್ಷರ ಸಂಸ್ಕೃತಿಯ ಆಂದೋಲನದಲ್ಲಿ ಕಲಿತವರಿಗೆ ಮತ್ತು ಕಲಿಯುವವರಿಗೆ ಉತ್ತಮ ಗುಣಮಟ್ಟದ ಪುಸ್ತಕಗಳ ಅವಶ್ಯಕತೆ ಇದೆ. ಕಲಿತವರು ಮರೆಯದಂತೆ, ಕಲಿಕೆಯನ್ನು ಮುಂದುವರಿಸುವಂತೆ ನೋಡಿ ಕೊಳ್ಳುವುದು ಎಲ್ಲರ ಕರ್ತವ್ಯ.

ಕನ್ನಡ ವಿಶ್ವವಿದ್ಯಾಲಯವು ನಾಡಿನ ಹಲವು ವಿದ್ವಾಂಸರೊಂದಿಗೆ ಸೇರಿ ನಡೆಸಿದ ಒಂದು ಸಾಮೂಹಿಕ ಪ್ರಯತ್ನದ ಫಲವಾಗಿ ಈ ಪುಸ್ತಕ ರೂಪತಾಳಿದೆ. ನವಸಾಕ್ಷರರು ಈ ಪುಸ್ತಕವನ್ನು ಪ್ರೀತಿಯಿಂದ ಸ್ವೀಕರಿಸುತ್ತಾರೆಂದು ನಂಬಿದ್ದೇವೆ. ಈ ಯೋಜನೆಯ ಯಶಸ್ಸಿಗೆ ಕಾರಣರಾಗಿರುವ ಉನ್ನತ ಸಲಹಾ ಸಮಿತಿ ಹಾಗೂ ಸಂಪಾದಕ ಸಮಿತಿಯ ಸದಸ್ಯರಿಗೆ, ಲೇಖಕರಿಗೆ, ಕಲಾವಿದರಿಗೆ ಹಾಗೂ ಈ ಯೋಜನೆಯಲ್ಲಿ ಪ್ರತ್ಯಕ್ಷವಾಗಿ, ಪರೋಕ್ಷವಾಗಿ ನಮ್ಮೊಡನೆ ಪಾಲ್ಗೊಂಡವರೆಲ್ಲರಿಗೂ ನಮ್ಮ ಹೃತ್ಪೂರ್ವಕವಾದ ವಂದನೆಗಳು. ನಮ್ಮ ವಿಶ್ವವಿದ್ಯಾಲಯದ ಮೇಲೆ ವಿಶ್ವಾಸವಿಟ್ಟು ಇಂತಹ ಒಂದು ಗುರುತರವಾದ ಯೋಜನೆಯನ್ನು ವಹಿಸಿಕೊಟ್ಟ ಲೋಕಶಿಕ್ಷಣ ಇಲಾಖೆಯ ನಿರ್ದೇಶಕರಾದ ಶ್ರೀ ಲೂಕೋಸ್ ವಲ್ಲತ್ತರೈ ಅವರಿಗೆ ನನ್ನ ಕೃತಜ್ಞತೆಗಳು. ಓದುಗರು ಈ ಪುಸ್ತಕದ ಬಗ್ಗೆ ತಮ್ಮ ಅಭಿಪ್ರಾಯಗಳನ್ನು ತಿಳಿಸಿದರೆ ನಮ್ಮ ಪಠ್ಯಪುಸ್ತಕ ರಚನೆಗೆ ಉಪಯೋಗವಾಗುತ್ತದೆ.

**ಚಂದ್ರಶೇಖರ ಕಂಬಾರ**
ಕುಲಪತಿಗಳು